ಕನ್ನಡ ವಿಶ್ವವಿದ್ಯಾಲಯ
ಹಂಪಿ

ೇ೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# "ನವೋದಯ ಕಾವ್ಯದಲ್ಲಿ ನಾಡು-ನುಡಿ ಪ್ರಜ್ಞೆ"

ನಿಬಂಧಕಾರರು

**ಶಿಲ್ಪ ಹೆಚ್.ಎಸ್.**
ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಪಿ.ಬೆಟ್ಟೇಗೌಡ**
ಸಹ ಪ್ರಾಧ್ಯಾಪಕರು
ಸರ್ಕಾರಿ ಮಹಿಳಾ ಕಾಲೇಜು
ವಿಜಯನಗರ, ಮೈಸೂರು



ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧

ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೦–೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# "ನವೋದಯ ಕಾವ್ಯದಲ್ಲಿ ನಾಡು–ನುಡಿ ಪ್ರಜ್ಞೆ"


ನಿಬಂಧಕಾರರು

**ಶಿಲ್ಪ ಹೆಚ್.ಎಸ್.**

ಕನ್ನಡ ಎಂ.ಫಿಲ್. ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು





ಮಾರ್ಗದರ್ಶಕರು

**ಡಾ. ಪಿ.ಬೆಟ್ಟೇಗೌಡ**

ಸಹ ಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಕಾಲೇಜು

ವಿಜಯನಗರ, ಮೈಸೂರು



ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೦–೧೧

# ದೃಢೀಕರಣ ಪತ್ರ

೨೦೧೦-೧೧ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS-00474**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿನಿಯಾದ ಶಿಲ್ಪ ಹೆಚ್.ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ **"ನವೋದಯ ಕಾವ್ಯದಲ್ಲಿ ನಾಡು-ನುಡಿ ಪ್ರಜ್ಞೆ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

01/2/2011

**ಮೈಸೂರು**
೩೦-೦೫-೨೦೧೧

**(ಡಾ. ಪಿ.ಬೆಟ್ಟೇಗೌಡ)**
ಮಾರ್ಗದರ್ಶಕರು
ಸಹ ಪ್ರಾಧ್ಯಾಪಕರು
ಸರ್ಕಾರಿ ಮಹಿಳಾ ಕಾಲೇಜು
ವಿಜಯನಗರ, ಮೈಸೂರು

# ಅಭ್ಯರ್ಥಿಯ ಘೋಷಣಾ ಪತ್ರ

**"ನವೋದಯ ಕಾವ್ಯದಲ್ಲಿ ನಾಡು-ನುಡಿ ಪ್ರಜ್ಞೆ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ **KVTMKS-00474**ರ ವಿದ್ಯಾರ್ಥಿನಿಯಾದ ನಾನು ೨೦೧೦-೧೧ನೇ ಸಾಲಿನ ಪರೀಕ್ಷೆಗಾಗಿ **ಡಾ. ಪಿ.ಬೆಟ್ಟೇಗೌಡ** ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Shilpa H.S.

**ಮೈಸೂರು**
ದಿನಾಂಕ: ೩೦-೦೫-೨೦೧೧

**(ಶಿಲ್ಪ.ಹೆಚ್.ಎಸ್)**
೨೦೧೦-೧೧ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ನವೋದಯ ಕಾವ್ಯದಲ್ಲಿ ನಾಡು-ನುಡಿ ಪ್ರಜ್ಞೆ
## ಪರಿವಿಡಿ


ಪುಟ ಸಂಖ್ಯೆ

ಅಧ್ಯಾಯ – ೧

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ೦೧-೦೩

ಅಧ್ಯಾಯ – ೨

ನವೋದಯ ಸಾಹಿತ್ಯದ ಹಿನ್ನೆಲೆ, ಪ್ರೇರಣೆ ಮತ್ತು ಪ್ರಭಾವ ೦೪-೨೪

ಅಧ್ಯಾಯ – ೩

ನವೋದಯ ಕಾವ್ಯದಲ್ಲಿ ನಾಡಪ್ರಜ್ಞೆ ೨೫-೪೫

ಅಧ್ಯಾಯ – ೪

ನವೋದಯ ಕಾವ್ಯದಲ್ಲಿ ನುಡಿ ಪ್ರಜ್ಞೆ ೪೬-೬೫

ಅಧ್ಯಾಯ – ೫

ನಾಡುನುಡಿ ಗೀತೆಗಳಿಂದ ಕರ್ನಾಟಕದ ಮೇಲಾದ

ಪರಿಣಾಮ ೬೬-೬೯

ಅಧ್ಯಾಯ – ೬

ನಾಡುನುಡಿ ಗೀತೆಗಳಲ್ಲಿನ ಕಾವ್ಯಧರ್ಮ ೭೦-೭೬

ಉಪಸಂಹಾರ ೭೭-೮೦

ಪರಾಮರ್ಶನ ಗ್ರಂಥಗಳು ೮೧-೮೨


*****

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದ ಅವಸ್ಥಾಂತರಗಳನ್ನು ಗಮನಿಸಿದಾಗ ಹಲವಾರು ಚಿಂತಕರು ತಮ್ಮದೇ ಆದ ಅರ್ಥಗಳಲ್ಲಿ ವಿಭಾಗಗಳನ್ನು ಮಾಡಿಕೊಂಡಿದ್ದಾರೆ. ಅಂತಹವರಲ್ಲಿ ಕನ್ನಡ ನಿಘಂಟನ್ನು ಬರೆದಂತಹ ಜಾರ್ಜ್ ಫರ್ಡಿನೆಂಡ್ ಕಿಟೆಲ್ ರವರು ಮುಖ್ಯವಾಗಿ ಮೂರು ಘಟ್ಟಗಳಾಗಿ ವಿಭಾಗ ಮಾಡಿಕೊಂಡಿದ್ದಾರೆ.

೧) ಹಳಗನ್ನಡ (ಕ್ರಿ.ಶ. ೬೦೦–೧೨೫೦)

೨) ನಡುಗನ್ನಡ (ಕ್ರಿ.ಶ. ೧೨೫೦–೧೬೦೦)

೩) ಹೊಸಗನ್ನಡ (ಕ್ರಿ.ಶ. ೧೬೦೦–ರಿಂದೀಚೆಗೆ)[೧]

ಈ ಘಟ್ಟಗಳಲ್ಲಿ ನಾವು 'ಹೊಸಗನ್ನಡ' ಕಾಲಘಟ್ಟಕ್ಕೆ ಬಂದಂತೆ ಅಲ್ಲಿ ನವೋದಯ, ನವ್ಯ, ಪ್ರಗತಿಶೀಲ, ದಲಿತಬಂಡಾಯ ಸಾಹಿತ್ಯ ಎಂಬುದಾಗಿ ವಿಭಾಗ ಮಾಡಿಕೊಂಡಿರುವುದನ್ನು ಗಮನಿಸಬಹುದು. ನಾವು ಮುಖ್ಯವಾಗಿ ಇಲ್ಲಿ ಚರ್ಚಿಸುತ್ತಿರುವುದು ನವೋದಯ ಸಾಹಿತ್ಯದ ಕಾಲಘಟ್ಟವನ್ನು.

ಈ ಪ್ರಬಂಧದಲ್ಲಿ ಮುಖ್ಯವಾಗಿ ಚರ್ಚಿಸುತ್ತಿರುವುದು ನವೋದಯ ಕಾಲದ ಸಾಹಿತ್ಯದ ಹಿನ್ನೆಲೆ, ಪ್ರೇರಣೆ, ಅದರಿಂದಾದ ಪ್ರಭಾವಗಳು. ಮುಖ್ಯವಾಗಿ ನವೋದಯ ಕಾಲಕ್ಕೆ ಪ್ರೇರಣೆಯಾದದ್ದು ಕರ್ನಾಟಕ ಏಕೀಕರಣದ ಸಂದರ್ಭ. ಆ ಹಿನ್ನೆಲೆಯಲ್ಲಿ ಕರ್ನಾಟಕ ಏಕೀಕರಣದ ಹಿನ್ನೆಲೆ, ಪ್ರೇರಣೆ ಪ್ರಭಾವಗಳನ್ನು ಇಲ್ಲಿ ಪ್ರಸ್ತಾಪ ಮಾಡಲಾಗಿದೆ.

ನವೋದಯ ಕಾಲದ ಸಾಹಿತ್ಯಕ್ಕೆ ಕರ್ನಾಟಕ ಏಕೀಕರಣ ಹೇಗೆ ಪ್ರಭಾವ ಬೀರಿತೋ, ಹಾಗೆಯೇ ಕರ್ನಾಟಕ ಏಕೀಕರಣದ ಮೇಲೆ ನವೋದಯ ಸಾಹಿತ್ಯವೂ ಪ್ರೇರಕವಾಗಿದೆ. ಹಾಗಾಗಿ ಇವೆರಡು ಪರಸ್ಪರ ಒಂದನ್ನೊಂದು ಪ್ರಭಾವಿಸಿವೆ.

ನವೋದಯ ಕಾಲದಲ್ಲಿ ಮೇಲುನೋಟಕ್ಕೆ ಹೆಚ್ಚಾಗಿ ಭಾವಗೀತೆಗಳು ಕಂಡುಬರುತ್ತವೆ. ಪ್ರಕೃತಿ ಪ್ರೇಮ ಮತ್ತು ಮನುಷ್ಯ ಸಂಬಂಧಗಳ ಗಾಢತೆ,

---

೧. ರಂ.ಶ್ರೀ.ಮುಗಳಿಯವರ 'ಕನ್ನಡ ಸಾಹಿತ್ಯಚರಿತ್ರೆ', ಪುಟ. ೩೪.

ವೈಚಾರಿಕತೆಯೇ ಹೆಚ್ಚಾಗಿ ಗೀತೆಗಳಲ್ಲಿ ಕಂಡುಬರುತ್ತವೆ. ಆದರೆ ಈ ಕಾಲದಲ್ಲಿ ಮತ್ತೊಂದು ಮುಖ್ಯವಾಗಿ ಕಾಣಿಸಿಕೊಂಡಿದ್ದು ಕರ್ನಾಟಕ ಏಕೀಕರಣದ ಹಿನ್ನೆಲೆಯಲ್ಲಿ ಕನ್ನಡ ನಾಡು–ನುಡಿ ಮೇಲಿನ ಗೀತೆಗಳನ್ನು ಗಮನಿಸಬಹುದು.

ನವೋದಯದ ಮುಖ್ಯ ಕವಿಗಳು ಬಿ.ಎಂ.ಶ್ರೀ ಗೋವಿಂದಪೈ, ಡಿ.ವಿ.ಜಿ. ಪು.ತಿ.ನ, ಜಿ.ಎಸ್.ಶಿವರುದ್ರಪ್ಪ. ಕುವೆಂಪು, ಬೇಂದ್ರೆ, ಮಾಸ್ತಿ, ಕೆ.ಎಸ್.ನರಸಿಂಹಸ್ವಾಮಿ, ಕೆ.ಎಸ್.ನಿಸಾರ್ ಅಹಮದ್, ಇವರೆಲ್ಲರ ಕವನಗಳನ್ನು ಆಯ್ಕೆ ಮಾಡಿ ನಾಡು, ನುಡಿಯನ್ನು ಕುರಿತಾದ ಕವನಗಳನ್ನು ತೆಗೆದುಕೊಂಡು ಪ್ರಸ್ತುತ ನಿಬಂಧವನ್ನು ಸಾದರಪಡಿಸಿದ್ದೇನೆ. ಈ ಅಧ್ಯಾಯದಲ್ಲಿ ಮುಖ್ಯವಾಗಿ ಕನ್ನಡ ನಾಡು ಮತ್ತು ನುಡಿಯ ಬಗ್ಗೆ ನವೋದಯ ಕಾಲದ ಕವಿಗಳು ಹೇಗೆ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುತ್ತ ಕನ್ನಡದ ಒಂದು ಚೌಕಟ್ಟನ್ನು ಹೇಗೆ ನಮ್ಮ ಮುಂದೆ ಕಟ್ಟಿಕೊಡುತ್ತಾರೆ ಎಂಬುದನ್ನು ಇಲ್ಲಿ ಚರ್ಚಿಸುತ್ತಾ ಪ್ರಬಂಧವನ್ನು ಸಾದರಪಡಿಸಿದ್ದೇನೆ.

ಭಾಷೆಗೆ ಸಂಬಂಧಿಸಿದಂತೆ ಗಮನಿಸಿದಾಗ ಆಂಗ್ಲರು ಈ ದೇಶದಿಂದ ಕಾಲುಕಿತ್ತರು ಸರಿ,ಆದರೆ ಇಂಗ್ಲಿಷ್ ಈ ದೇಶದಿಂದ ಮರೆಯಾಗಬೇಕೆಂದು ಯಾವ ಮೂರ್ಖನೂ ಹೇಳಲಾರ. ಅದು ಯಾರಿಗೆ ಎಷ್ಟು ಬೇಕು, ಯಾವಾಗ ಕಲಿಯಬೇಕೆಂಬ ವಿಚಾರದಲ್ಲಿ ಮಹಾಕವಿ ಪ್ರವಾದಿ ಕುವೆಂಪು ಅವರ ಮಾತೇ ದೇಶದ ಹಿತದೃಷ್ಟಿಯಿಂದ ಕೊನೆಯಾಗಬೇಕು. "ಪ್ರತಿಯೊಂದು ಜಿಲ್ಲೆಯ ಕೇಂದ್ರದಲ್ಲಿ ಇಂಗ್ಲಿಷ್ ಸಂಸ್ಥೆಗಳಿರಲಿ, ಆದರೆ ಅವರಿಗೆ ಅಗತ್ಯವಾದಷ್ಟು ಕನ್ನಡವನ್ನು ಕಲಿಸಿ"[೧] ಎಂದು ಪ್ರೊ. ದೇ.ಜ.ಗೌ ಅವರು ಕೂಡ ಈ ಮಾತುಗಳನ್ನೇ ಹೇಳುತ್ತಾರೆ.

ಕನ್ನಡಿಗರೆಲ್ಲರು ಒಟ್ಟಾಗಬೇಕು, ಅವರ ಮನಸ್ಸು ಒಂದಾಗಬೇಕು; ಒಬ್ಬರಿಗೊಬ್ಬರು ನೆರವಾಗಬೇಕು. ಜಾತಿ, ಮತ, ಪಕ್ಷಾದಿ, ಯಾವ ಭೇದವೂ ಅವರ ಸಾಮರಸ್ಯಕ್ಕೆ ಹುಳಿ ಹಿಂಡಬಾರದು; ಜಗತ್ತಿನಲ್ಲಿಯೇ ಸರ್ವವಿಧದಿಂದಲೂ ಸುಸಮೃದ್ಧವಾದ ನಾಡನ್ನು ಕಟ್ಟುವಲ್ಲಿ ಏಕೀಕರಣ ಸಾರ್ಥಕಗೊಳ್ಳಬೇಕೆಂಬುದು ಅದಕ್ಕಾಗಿ ದುಡಿದವರ ಆಶಯ. ಆ ಆಶಯ ನೆರವೇರಲಿಲ್ಲವೆಂದರೆ ಕನ್ನಡಿಗರು ಸತ್ಯಕ್ಕೆ ದ್ರೋಹ ಬಗೆದಂತಾಗುತ್ತದೆ. ಆದ್ದರಿಂದ ಕನ್ನಡ ನಾಡು ಮತ್ತು ನುಡಿಯನ್ನು ಗೌರವಿಸಿ ಅದನ್ನು ಕಾಪಾಡಬೇಕು ಎಂಬುದೇ ಇಲ್ಲಿಯ ಆಶಯವಾಗಿದೆ.

---

೧. ಪ್ರೊ. ಜಿ.ವೆಂಕಟಸುಬ್ಬಯ್ಯರ, ಕರ್ನಾಟಕ ಏಕೀಕರಣದ ಅನುಭವಗಳು, ಪುಟ. ೨೦.

ಯಾವುದೇ ಒಂದು ವಿಷಯದ ಅಧ್ಯಯನಕ್ಕೆ ನಾವು ತೊಡಗುವ ಮೊದಲು ಆ ವಸ್ತುವಿನ ಬಗ್ಗೆ ನಮ್ಮಲ್ಲಿ ಒಲವು ಅಥವಾ ಅಭಿರುಚಿ ಇದ್ದಾಗ ಮಾತ್ರ ನಾವು ಆಯ್ಕೆ ಮಾಡಿಕೊಂಡಿರುವ ವಿಷಯದ ಅಧ್ಯಯನದಲ್ಲಿ ತಲ್ಲೀನರಾಗಿ ನಮ್ಮ ಸಂವೇದನಾಶೀಲತೆ ಮಟ್ಟಿಗೆ ಅದನ್ನು ವಿಶ್ಲೇಷಿಸಲು ಸಾಧ್ಯ.

ಪ್ರಸ್ತುತ ಈ ನಿಬಂಧದಲ್ಲಿ ಮೊದಲನೆಯ ಅಧ್ಯಾಯದಲ್ಲಿ 'ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ'ಯಲ್ಲಿ ಈ ನಿಂಬಂಧ ರಚನೆಗೆ ಉದ್ದೇಶವೇನು ಎಂಬುದನ್ನು ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ನವೋದಯ ಸಾಹಿತ್ಯದ ಹಿನ್ನೆಲೆ, ಪ್ರೇರಣೆ ಮತ್ತು ಪ್ರಭಾವ ಹಾಗೂ ಕನ್ನಡ ನಾಡು ನುಡಿಯನ್ನು ಕುರಿತ ನವೋದಯ ಕವಿಗಳ ಚಿಂತನೆ ಮತ್ತು ಭಾವನೆಗಳಿಗೆ ಕರ್ನಾಟಕ ಏಕೀಕರಣ ಚಳುವಳಿಗೆ ಹೇಗೆ ಪ್ರೇರಕವಾಯಿತು ಎಂಬುದನ್ನು ಅಗತ್ಯ ಆಧಾರಗಳನ್ನಿಟ್ಟುಕೊಂಡು ಚರ್ಚಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ನವೋದಯ ಸಾಹಿತ್ಯದಲ್ಲಿ ನಾಡು ಪ್ರಜ್ಞೆಯನ್ನು ಕುರಿತಾಗಿ ಚರ್ಚಿಸಲಾಗಿದೆ. ಕನ್ನಡ ನಾಡಿನ ವೈಭವ, ವರ್ಣನೆಯನ್ನು ಕುರಿತಾತಿ ಚರ್ಚಿಸಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಕನ್ನಡ ನುಡಿಯನ್ನು ಕುರಿತಾಗಿ ಚರ್ಚಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ನಾಡು ನುಡಿ ಗೀತೆಗಳಿಂದ ಕರ್ನಾಟಕದ ಮೇಲೆ ಆದ ಪರಿಣಾಮಗಳನ್ನು ಪರಿಚಯಿಸಲಾಗಿದೆ. ಆರನೇ ಅಧ್ಯಾಯದಲ್ಲಿ ನವೋದಯ ನಾಡಗೀತೆಗಳಲ್ಲಿನ ಕಾವ್ಯಧರ್ಮವನ್ನು ಕುರಿತು ಚರ್ಚಿಸಲಾಗಿದೆ. ಏಳನೇ ಅಧ್ಯಾಯದಲ್ಲಿ ನವೋದಯ ಕಾವ್ಯದಲ್ಲಿನ ನಾಡುನುಡಿಗೀತೆಗಳ ಒಟ್ಟು ನೋಟದ ಉಪಸಂಹಾರವಿದೆ.

ಈ ನಿಬಂಧವು ನವೋದಯ ಕಾವ್ಯದಲ್ಲಿ ನಾಡುನುಡಿ ಪ್ರಜ್ಞೆಯನ್ನು ಕುರಿತಾದುದಕ್ಕೆ ಮಾತ್ರ ಸೀಮಿತವಾಗಿದೆ. ಪ್ರಾಸಂಗೀಕವಾಗಿ ನವೋದಯ ಸಾಹಿತ್ಯದಿಂದ ಕರ್ನಾಟಕದ ಮೇಲೆ ಆದ ಪರಿಣಾಮವನ್ನು ಮತ್ತು ಕಾವ್ಯಧರ್ಮವನ್ನು ಚರ್ಚಿಸುತ್ತಾ ವಿವೇಚನೆ ನಡೆಸಲಾಗಿದೆ. ಹಾಗೆಯೇ ನವೋದಯ ಕಾವ್ಯದಲ್ಲಿ ನಾಡು-ನುಡಿ ಪ್ರಜ್ಞೆಯನ್ನು ಗುರುತಿಸುವುದೇ ಈ ನಿಬಂಧ ರಚನೆಯಾಗಿದೆ.

# ಅಧ್ಯಾಯ – ೨

# ನವೋದಯ ಸಾಹಿತ್ಯದ ಹಿನ್ನೆಲೆ, ಪ್ರೇರಣೆ ಮತ್ತು ಪ್ರಭಾವ

ಆಧುನಿಕ ಸಾಹಿತ್ಯ ಎಂದು ಗುರುತಿಸಿ, ಅದರ ಪ್ರಾರಂಭದ ನವೋದಯ ಸಾಹಿತ್ಯ ಸೃಷ್ಟಿ, ಕಳೆದ ಸು. ೮೦ ವರ್ಷಗಳದ್ದು. ೧೯೨೧ರಲ್ಲಿ ಪ್ರೊ. ಬಿ.ಎಂ.ಶ್ರೀ. ಅವರ 'ಇಂಗ್ಲಿಷ್ ಗೀತೆಗಳು' ಪ್ರಕಟವಾಯಿತು. ಇಲ್ಲಿಗೆ ನವೋದಯ ಸಾಹಿತ್ಯದ ಹೆದ್ದಾರಿ ತೆರೆಯಿತು ಎನ್ನಬಹುದು. ಈ ಹೊತ್ತಿಗಾಗಲೇ ಆಧುನಿಕ ಸಾಹಿತ್ಯದ ಅರುಣೋದಯವು ಮುದ್ದಣನ 'ರಾಮಶ್ವಮೇದ', ಎಂ.ಎಸ್.ಪುಟ್ಟಣನವರ ಕಾದಂಬರಿ ಮಾಡಿದ್ದುಣ್ಣೋ ಮಹಾರಾಯ, ಉತ್ತರ ಕನ್ನಡ ಜಿಲ್ಲೆಯಲ್ಲಿ ರಚಿತವಾದುದೆಂದು ಹೇಳಲಾದ 'ಇಗ್ಗಪ್ಪ ಹೆಗ್ಗಡೆ ವಿವಾಹ' ಪ್ರಹಸನ ಮೊದಲಾದ ಕೃತಿಗಳಲ್ಲಿ ಕಂಡಿತು.

"೧೭೦೦ರಿಂದ ಕನ್ನಡ ಸಾಹಿತ್ಯ ಬಡಕಲಾಗಿಯೇ ಉಳಿಯಿತು. ಇದಕ್ಕೆ ಹಲವಾರು ಕಾರಣಗಳನ್ನು ಹೇಳಬಹುದಾದರೂ ಕವಿಗಳು ರಾಜಾಶ್ರಯವನ್ನು ನೆಚ್ಚಿದ್ದು, ಪಂಡಿತ ವರ್ಗವನ್ನು ಮೆಚ್ಚಿಸಲು ಬರೆಯಬೇಕಾದದ್ದು ಮುಖ್ಯ ಕಾರಣಗಳು. ವಚನ ಸಾಹಿತ್ಯ, ದಾಸಸಾಹಿತ್ಯಗಳು ಜನಜೀವನದಲ್ಲಿ ಬೇರುಬಿಟ್ಟವು. ಇವನ್ನು ರಚಿಸಿದವರು ಜೀವನದಲ್ಲಿ ಯಾವುದು ಬಹುಮುಖ್ಯ. ಯಾವುದು ಅದಕ್ಕಿಂತ ಕಡಿಮೆ ಮುಖ್ಯ, ಯಾವುದು ಅಮುಖ್ಯ ಎಂಬ ಖಚಿತವಾದ ಮೌಲ್ಯಶ್ರೇಣಿ ಪಡೆದಿದ್ದವರು. ತಮ್ಮ ಜೀವನಾನುಭವದಿಂದ ಜನಕ್ಕೆ ಹೇಳಬೇಕಾಗಿದ್ದ ಚಿಂತನೆವುಳ್ಳವರಾಗಿದ್ದರು. ಅನಂತರ ಇಂತಹ ಸ್ವಂತಿಕೆ ಇದ್ದವರು ಬರಲಿಲ್ಲ. ಇಲ್ಲಿನ ರಾಜ್ಯಗಳು, ಪುಟ್ಟ ಸಂಸ್ಥಾನಗಳು ಇವುಗಳ ಮೇಲೆ ಕದನಗಳು, ಇವುಗಳಲ್ಲಿ ಹೊರಗಿನವರ ಪ್ರವೇಶ, ಇವುಗಳಿಂದ ಜನಜೀವನ ಪ್ರಕ್ಷುಬ್ಧವಾಯಿತು. ಯುದ್ಧಗಳಲ್ಲಿ ಪ್ರದೇಶಗಳು ಕೈ ಬದಲಾಯಿಸಿದಾಗ ಮತಗಳ ಮತ್ತು ಭಾಷೆಗಳ ವಿರೋಧಕ್ಕೆ ಅವಕಾಶವಾಯಿತು. ಉತ್ತರ ಕರ್ನಾಟಕ ಮಹಾರಾಷ್ಟ್ರದ ಭಾಗವಾಗಿ ಕನ್ನಡದ ಅಭ್ಯಾಸವೇ ಕಷ್ಟವಾಯಿತು. ಈ ಎಲ್ಲಾ ಕಾರಣದಿಂದ ಸಾಹಿತ್ಯದ ನದಿ ಸಣ್ಣ ತೊರೆಯಾಗಿ ಹರಿಯಿತು."[೧]

ಆಧುನಿಕ ಸಾಹಿತ್ಯ ಎಂದು ಯಾವುದನ್ನು ಕರೆಯುತ್ತೇವೆ? ಈ ಸಾಹಿತ್ಯದ ಲಕ್ಷಣಗಳೇನು? ಈ ಸಾಹಿತ್ಯವನ್ನು ಹಿಂದಿನ ಸಾಹಿತ್ಯದಿಂದ ಮುಖ್ಯವಾಗಿ

---

೧. ಎಲ್.ಎಸ್.ಶೇಷಗಿರಿರಾವ್‌ರ ಹೊಸಗನ್ನಡ ಸಾಹಿತ್ಯ ಚರಿತ್ರೆ, ಪುಟ. ೧.

ಬೇರ್ಪಡಿಸುವುದು ಇದರ ಯಾವ ಮನೋಧರ್ಮ? ಈ ಸಾಹಿತ್ಯದ ಆಸಕ್ತಿಯ ಕೇಂದ್ರ ಮನುಷ್ಯ, ದೇವರಲ್ಲ ಎಂದರೆ ಇದು ದೇವರನ್ನು ಮರೆಯಲೇಬೇಕು ಎಂದಲ್ಲ. (ಆಧುನಿಕ ಸಾಹಿತ್ಯದ ನವೋದಯ ಲೇಖಕರಲ್ಲಿ ಶ್ರೀನಿವಾಸರ ಕವನಗಳಲ್ಲಿ ಸಮರ್ಪಣ ಭಾವವಿದೆ. ಕುವೆಂಪು ಮನುಷ್ಯನನ್ನು ಮೀರಿದ ಶಕ್ತಿಯೊಂದರ ಇರವನ್ನು ಗುರುತಿಸುತ್ತಾರೆ; ಕಾರಂತರಿಗೆ ದೇವರ ಅಸ್ತಿತ್ವದ ಪ್ರಶ್ನೆಯಲ್ಲಿ ಆಸಕ್ತಿಯಿಲ್ಲ. ಆದರೆ ದೇವರಲ್ಲಿ ನಂಬಿಕೆಯನ್ನಿಟ್ಟುಕೊಂಡು ಅದರಿಂದ ಜೀವನವನ್ನು ಎದುರಿಸುವ ಮತ್ತು ನಡೆಸುವ ಶಕ್ತಿ ಪಡೆಯುವವರನ್ನು ಗೌರವಿಸಬಲ್ಲರು). ಆದರೆ ಇದು ಮುಖ್ಯವಾಗಿ ಮನುಷ್ಯ ಸರ್ವಶಕ್ತನಲ್ಲ ಎಂದು ಗುರುತಿಸಿಯೂ ಅವನು ದೀನ ಎಂದು ಭಾವಿಸಿದಾಗಲೂ, ಅವನಲ್ಲಿ ಆಸಕ್ತಿಯನ್ನು ಕಳೆದುಕೊಳ್ಳುವುದಿಲ್ಲ. ಜೀವನಶ್ರದ್ಧೆ ಇರುವ ಲೌಕಿಕತನ ಇದರ ಲಕ್ಷಣ.

**ನವೋದಯ ಸಾಹಿತ್ಯದ ಪ್ರೇರಣೆಗಳು**

ಕನ್ನಡದಲ್ಲಿ ಹೊಸ ಬಗೆಯ ಸಾಹಿತ್ಯ ಸೃಷ್ಟಿಗೆ ಮುಖ್ಯ ಪ್ರೇರಣೆ ಇಂಗ್ಲಿಷ್ ವಿದ್ಯಾಭ್ಯಾಸದಿಂದ ಬಂದದ್ದು. ಇಂಗ್ಲಿಷ್ ವಿದ್ಯಾಭ್ಯಾಸದಿಂದ ಸಾಹಿತ್ಯದ ಮಟ್ಟಿಗೆ ಮುಖ್ಯವಾಗಿ ಎರಡು ಪರಿಣಾಮಗಳಾದವು. ಮೊದಲನೆಯದಾಗಿ ಹೊಸದೊಂದು ಜೀವನ ಮನೋಧರ್ಮದ ದರ್ಶನವಾದದ್ದು, ಎರಡನೆಯದು ಹೊಸದೊಂದು ಸಾಹಿತ್ಯದ ಜಗತ್ತೆ ಲಭ್ಯವಾದದ್ದು.

"ಅಂದಿನ ಶಿಕ್ಷಣದ ರೀತಿಯನ್ನು ಈಗ ನಾವು ಕಲ್ಪಿಸಿಕೊಳ್ಳುವುದು ಅಗತ್ಯ. ಪ್ರೌಢಶಾಲೆಯಲ್ಲಿಯೇ ಎಲ್ಲ ವಿದ್ಯಾರ್ಥಿಗಳಾಗಿ ಇಂಗ್ಲೆಂಡಿನ ಚರಿತ್ರೆಯನ್ನು ಅಭ್ಯಾಸ ಮಾಡುತ್ತಿದ್ದರು. ವಿಜ್ಞಾನದ ವಿದ್ಯಾರ್ಥಿಗಳು ಕಡ್ಡಾಯ ಇಂಗ್ಲಿಷ್ ಅಭ್ಯಾಸಕ್ಕೆ ಓದುತ್ತಿದ್ದ ಹಲವು ಪಠ್ಯಪುಸ್ತಕಗಳು ಇಂದು ಎಂ.ಎ. ತರಗತಿಗಳವರು ಅಭ್ಯಾಸ ಮಾಡುವಂತಹವು. ೧೪ನೆಯ ಶತಮಾನದ ಛಾಸರ್‌ನ ಕವನಗಳನ್ನು ಓದುತ್ತಿದ್ದರು. ಷೇಕ್ಸ್‌ಪಿಯರ್‌ನ ನಾಟಕಗಳ ಅಭ್ಯಾಸ ಮಾಡುತ್ತಿದ್ದರು. ಜೊತೆಗೆ ಕ್ರಿ.ಪೂ. ನಾಲ್ಕನೆಯ ಶತಮಾನದ ಗ್ರೀಕ್ ಬರಹಗಾರ ಕ್ಸೆನೋಫಾನ್‌ನ 'ಅನಾಬೇಸಿಸ್'ನ ಇಂಗ್ಲಿಷ್ ಅನುವಾದ, ಪ್ಲೇಟೋನ ಸಂಭಾಷಣೆಗಳ ಅನುವಾದ, 'ಜೇಮ್ಸ್ ಫ್ರೊಟನ' ಜೂಲಿಯಸ್ ಸೀಸರ್, ಕಾರ್ಲೈಲ್‌ನ 'ಹೀರೋ ಅಂಡ್ ಹೀರೊ ವರ್‌ಷಿಪ್ ಮಿಲ್ಟನ್, ವರ್ಡ್ಸ್‌ವರ್ತ್ ಷೆಲ್ಲಿ, ಕೀಟ್ಸ್,

ಬ್ರೌನಿಂಗ್, ಟೆನಿಸನ್, ಅರ್ನಲ್ಡ್ ಮೊದಲಾದವರ ಕವನಗಳು, ಜೇನ್ ಆಸ್ಟಿನ್, ಸ್ಕಾಟ್, ಥ್ಯಾಕರೆ ಮೊದಲಾದವರ ಕಾದಂಬರಿಗಳು ಪಠ್ಯಪುಸ್ತಕಗಳಾಗಿರುತ್ತಿದ್ದವು."[೧]

ಎಂದರೆ ಸು. ಐದು ಶತಮಾನಗಳಿಗೂ ಹೆಚ್ಚಿನ ಕಾಲದ ಇಂಗ್ಲಿಷ್ ಸಾಹಿತ್ಯವು ವಿದ್ಯಾರ್ಥಿಗಳಿಗೆ ಒಮ್ಮೆಲೆ ಲಭ್ಯವಾಯಿತು. ಇಂಗ್ಲಿಷ್ ಸಾಹಿತ್ಯ, ಇಂಗ್ಲೆಂಡಿನ ಚರಿತ್ರೆ ಇವುಗಳ ಅಧ್ಯಯನದಿಂದ ಎಲ್ಲವನ್ನು ಪ್ರಶ್ನಿಸುವ, ವಿಶ್ಲೇಷಿಸುವ ಮನೋಧರ್ಮದ ಪರಿಚಯವಾಯಿತು. (ಉಪನಿಷತ್ತುಗಳಿಂದ ವಚನಕಾರರು, ಸರ್ವಜ್ಞನವರೆಗೆ ನಮ್ಮ ಸಾಹಿತ್ಯದಲ್ಲಿ ಈ ಮನೋಧರ್ಮ ಕಂಡಿದೆ. ಆದರೆ ಹೊಸ ಸಾಹಿತ್ಯದ ಯುಗದ ಹಿಂದಿನ ಕಾಲದಲ್ಲಿ ಇದು ಹಿಂದೆ ಸರಿದಿತ್ತು ಎನ್ನಬೇಕು). ರಾಜನು ಭಗವಂತನ ಪ್ರತಿನಿಧಿ ಎಂಬ ನಂಬಿಕೆಯನ್ನು ಹೊಂದಿದ್ದ ಜನತೆಯೂ ರಾಜನ ಅಧಿಕಾರವನ್ನು ಪ್ರಶ್ನಿಸುತ್ತ ಹೋಗಿ ಪ್ರಜೆಗಳ ಸ್ವಾತಂತ್ರ್ಯಕ್ಕೆ ಹೋರಾಟ ನಡೆಸಿದ ರೀತಿ, ಅದರ ಹಿಂದಿನ ಮನೋಧರ್ಮ ಇವುಗಳ ದರ್ಶನವಾಯಿತು. "ಇಷ್ಟೇ ಮುಖ್ಯವಾದ ಇನ್ನೊಂದು ಅಂಶ ಎಂದರೆ, ಸಾಹಿತ್ಯ ಜೀವನಗಳ ಸಂಬಂಧ ಎಷ್ಟು ವ್ಯಾಪಕವಾದುದು, ಹೇಗೆ ಸಾಹಿತ್ಯದ ಸಮಾಜದ ಮತ್ತು ವ್ಯಕ್ತಿಯ ಜೀವನದ ಎಲ್ಲ ಸಂವೇದನೆಗಳಿಗೆ ಸ್ಪಂದಿಸುತ್ತದೆ ಎಂಬುದರ ದರ್ಶನವಾದದ್ದು. ಸಮಾಜದ ಕಟ್ಟಡ ರಾಜನ ಅಧಿಕಾರದ ಇತಿಮಿತಿ, ದಂಗೆಯ ಸ್ವರೂಪ ಅಗತ್ಯ ಪರಿಣಾಮ – ಷೇಕ್ಸ್‌ಪಿಯರ್‌ನ ನಾಟಕಗಳಲ್ಲಿ ಇವೆಲ್ಲದರ ವಿಶ್ಲೇಷಣೆ, ಮಿಲ್ಟನ್‌ನ ಕವನಗಳಲ್ಲಿ ಸ್ವಾತಂತ್ರ್ಯದ ಪ್ರೇಮದ ಅಭಿವ್ಯಕ್ತಿ, ರೊಮ್ಯಾಂಟಿಕ್ ಕವಿಗಳಲ್ಲಿ ಕವಿಯ ವಿಶಿಷ್ಟ ಅನುಭವಗಳು ಇವೆಲ್ಲ ಭಾರತೀಯ ಸಾಹಿತ್ಯವಷ್ಟನ್ನೇ ಓದಿದ್ದವರಿಗೆ ಹೊಸ ಅನುಭವವಾದವು. ಮಿಲ್ಟನ ಷೆಲ್ಲಿ, ಬೈರನ್, ಇವರು ಸಮಾಜವನ್ನೇ ಎಚ್ಚರಿಸುವ ಕ್ರಾಂತಿಕಾರರಾದರು. ಡಿಕನ್ಸ್‌ನ ಕಾದಂಬರಿಗಳು ಕೈಗಾರಿಕಾ ಕ್ರಾಂತಿ ಸೃಷ್ಟಿಸಿದ ಸಮಸ್ಯೆಗಳನ್ನು ಮಾನವ ಸ್ವಭಾವ ಮತ್ತು ಜೀವನಗಳ ಸಂದರ್ಭದಲ್ಲಿ ಪೃಥಕ್ಕರಿಸಿದವು."[೨]

ಇನ್ನೂ ಮುಖ್ಯವಾಗಿ ಗಮನಿಸಬೇಕಾದದ್ದು ಕನ್ನಡದ ಪರಂಪರೆ ಹದಿನೇಳನೆಯ ಶತಮಾನದ ನಂತರ ರಾಜಕೀಯ ಸ್ಥಿತ್ಯಂತರಗಳಲ್ಲಿ ಮಂಕಾಗಿತ್ತಾದರೂ ತತ್ತ್ವಪದಕಾರರಲ್ಲಿ ಜನಪದ ಸಾಹಿತ್ಯದಲ್ಲಿ, ಅಲ್ಲೊಮ್ಮೆ ಇಲ್ಲೊಮ್ಮೆ ಮಿಂಚುತ್ತಿರುವ ಮುದ್ದಣ್ಣ ಕೆಂಪುನಾರಾಯಣರಂಥವರಲ್ಲಿ ಅದು ತನ್ನ ಹೊಳಪನ್ನು ತೋರಿಸುತ್ತಿತ್ತು.

---

೧. ಪ್ರೊ. ಎಲ್.ಎಸ್.ಶೇಷಗಿರಿರಾವ್‌ರ 'ಹೊಸಗನ್ನಡ ಸಾಹಿತ್ಯ ಚರಿತ್ರೆ, ಪುಟ. ೭.

೨. ಅದೇ., ಪುಟ. ೯.

ನವೋದಯ ಪೂರ್ವದಲ್ಲಿ ಕನ್ನಡ ಸಾಹಿತ್ಯದ ಪುನರುಜ್ಜೀವನಕ್ಕಾಗಿ ಸಂಸ್ಕೃತ, ಇಂಗ್ಲಿಷ್, ಬಂಗಾಲಿ ಮತ್ತು ಮರಾಠಿ ಭಾಷೆಗಳ ಕೆಲವು ಕೃತಿಗಳನ್ನು ಕನ್ನಡಕ್ಕೆ ತರುವ ಹಾಗೂ ಸ್ವತಂತ್ರವಾಗಿಯೂ ಕನ್ನಡದಲ್ಲಿ ಬರೆಯುವ ಪ್ರಯತ್ನಗಳು ನಡೆದು ಸಾಹಿತ್ಯಿಕ ಭೂಮಿಕೆಯೊಂದು ಸಿದ್ಧವಾಗಿತ್ತು. ಭಾರತದ ಮಟ್ಟದಲ್ಲಿ ಸ್ವತಂತ್ರ ರಾಷ್ಟ್ರ ನಿರ್ಮಾಣದ ಕಾರ್ಯ ಸಾಗಿರುವಂತೆ ನಮ್ಮ ನಾಡಿನ ಮಟ್ಟದಲ್ಲಿ ಅಖಂಡ ಕರ್ನಾಟಕದ ಕನಸು ಕಾಣಲು ಪ್ರಾರಂಭವಾಗಿತ್ತು. ನೌಕರರ ಶಾಹಿಯನ್ನು ನಿರ್ಮಿಸಲು ಹೊರಟ ಇಂಗ್ಲಿಷ್ ಶಿಕ್ಷಣವು ಅಂದಿನ ಯುವಕರಲ್ಲಿ ವೈಚಾರಿಕತೆಯನ್ನು ಬೆಳಸಿದ್ದು ಒಂದು ವಿಶೇಷ. ತಮ್ಮ ನಾಡು, ತಮ್ಮ ಭಾಷೆ, ತಮ್ಮ ಸಂಸ್ಕೃತಿ, ತಮ್ಮ ಪರಂಪರೆಗಳನ್ನು ಇತಿಹಾಸದ ಪುಟಗಳಲ್ಲಿ ಹೊರಳಿಸಿ ನೋಡುತ್ತ, ನವಕರ್ನಾಟಕ ನಿರ್ಮಾಣದ ದಾರಿಯನ್ನು ಹುಡುಕುವುದರಲ್ಲಿ ನಮ್ಮ ಹಿರಿಯರು ತನ್ಮಯರಾಗಿದ್ದರು. ಒಂದು ಕೈಯಿಂದ ನಮ್ಮ ಪರಂಪರೆಯ ಬೇರುಗಳನ್ನು ಗುರುತಿಸುತ್ತ ಇನ್ನೊಂದು ಕೈಯಿಂದ ಆಧುನಿಕ ಪ್ರಗತಿಯನ್ನು ಸಾಧಿಸಲು ನಮ್ಮವರು ಹವಣಿಸಿದರು.

೧೯೨೩ರಲ್ಲಿ ಬೇಂದ್ರೆಯವರು ಮಧುರಚೆನ್ನರಿಗೆ ಬರೆದ ಪತ್ರವೊಂದರಲ್ಲಿ "ಭೋಗಲಂಪಟವಾಗಿ ಕನ್ನಡನಾಡನ್ನು ಬಸವ ಅಲ್ಲಮಾದಿ ಕಾರಣಿಕರು ದೇವನಲ್ಲಿ ನಿವೃತ್ತರಾಗಿ ಆಮೇಲೆ ದೇವನಿಂದ ಪ್ರವೃತ್ತರಾಗಿ ಉದ್ಧರಿಸಿದರು. ಒಕ್ಕಟ್ಟಿಲ್ಲದೆ ಇಕ್ಕಟ್ಟಿನಲ್ಲಿ ಬಿದ್ದಿದ್ದ ಕಾರ್ಯ ಪರಾಙ್ಮುಖ ಕರ್ನಾಟಕವನ್ನು ದುರಂಧರ ಮಾಡಲು ಮಧ್ವ ವಿದ್ಯಾರಣ್ಯರು ಆ ಮಾರ್ಗವನ್ನೇ ಅನುಸರಿಸಿದರು. ವ್ಯವಹಾರಲೋಲುಪರಾದ ಕನ್ನಡಿಗರನ್ನು ದಾಸಕೂಟದವರು ಮತ್ತೆ ಅದೇ ರೀತಿಯಿಂದ ಮೇಲಕ್ಕೆತ್ತಿದರು. ಹೀಗೆ ೧೨, ೧೪, ೧೬ನೇ ಶತಮಾನಗಳಲ್ಲಿ ಮೂರು ಸಲದ ಧರ್ಮಗ್ಲಾನಿಯನ್ನು ಕರ್ನಾಟಕ ಸೀಮಾಪುರುಷರು ಕನ್ನಡದವ್ವನ ಪವಾಡಪುರುಷರು ಹೋಗಲಾಡಿಸಿದರು. ೧೮ನೇಯ ಶತಮಾನದಲ್ಲಿ ಚಿಕ್ಕದೇವರಾಯನು ಅಂಥದೇ ಒಂದು ಪ್ರಯತ್ನ ಮಾಡಿದನು. ಅದು ಅಷ್ಟು ಫಲಕಾರಿಯಾಗಲಿಲ್ಲ. ಇದು ೨೦ನೆಯ ಶತಮಾನ. ಈ ಸಲ ನಾವು ಇಮ್ಮಡಿ ಹುರುಪಿನಿಂದ ಶುದ್ಧ ಪ್ರೇರಣೆಯ ಮಂದಾಕಿನಿಯನ್ನು ಭೂಲೋಕಕ್ಕೆ ಭಾಗೀರಥಿಯಾಗಿ ತರಲಿಕ್ಕೇ ಬೇಕು...." ಎಂದಿದ್ದಾರೆ. ಹೀಗೆ ಕನ್ನಡ ನಾಡನ್ನು ಪುನರ್ ನಿರ್ಮಿಸುವ ನೋಂಪಿಯನ್ನು ತಳೆಯುತ್ತ, ಹರಿಹರನ ಪಂಪಾಶತಕದ ಭಾವವನ್ನು, ದಾಸರ ವ್ಯಾಕುಲತೆಯನ್ನು ಅನುಭಾವಿಕ ನೆಲೆಯಲ್ಲಿ ಸ್ವೀಕರಿಸುತ್ತ, ಆಧುನಿಕತೆಗೆ ಹೊಸ ರೂಪಕೊಡುತ್ತಿದ್ದ ಮಹಾತ್ಮ ಗಾಂಧಿಯವರನ್ನು, ರವೀಂದ್ರರನ್ನು, ಶ್ರೀ ಅರವಿಂದರನ್ನು

ರಾಮಕೃಷ್ಣ ಪರಮಹಂಸ, ವಿವೇಕಾನಂದರನ್ನು ಮತ್ತೊಮ್ಮೆ ಸ್ಮರಿಸಿಕೊಳ್ಳುತ್ತಾರೆ ಬೇಂದ್ರೆಯವರು.

ಈ ತಾತ್ವಿಕ ಚಿಂತನೆಯ ಅಸ್ತಿವಾರದ ಮೇಲೆ ಕಾವ್ಯದ ಮತ್ತು ಕಾವ್ಯೇತರ ಸಾಹಿತ್ಯದ ಹೊಸ ಸೃಷ್ಟಿಯನ್ನು ನವೋದಯ ಕವಿಗಳು, ಲೇಖಕರು ತಮ್ಮದಾಗಿಸಿಕೊಳ್ಳುತ್ತಾರೆ. ದೇಸಿಯ ಪರಂಪರೆ ಘನಿಷ್ಠವಾಗಿರುವಾಗಲೂ ಪಾಶ್ಚಾತ್ಯ ಸಾಹಿತ್ಯದಿಂದ ಪ್ರೇರಣೆಗಳನ್ನು ಆ ಕಾಲದಲ್ಲಿ ನಮ್ಮ ಕವಿಗಳು ಪಡೆದರೆಂಬುದು ಒಂದು ಐತಿಹಾಸಿಕ ಸತ್ಯ. ಅಂತೆಯೇ ಹೊಸಗನ್ನಡ ಸಾಹಿತ್ಯ ಚರಿತ್ರೆ ಬರೆದ ಪ್ರೊ. ಎಲ್.ಎಸ್.ಶೇಷಗಿರಿರಾವ್ ಅವರು "ನವೋದಯ ಸಾಹಿತ್ಯ ಯುರೋಪಿನಲ್ಲಿ ರೋಮ್ಯಾಂಟಿಕ್ ಎಂದು ಕರೆಯುವ ಸಾಹಿತ್ಯಕ್ಕೆ ಹಲವು ರೀತಿಗಳಲ್ಲಿ ಸಮೀಪವಾಗಿದೆ"[೧] ಎಂದು ಹೇಳಿದ್ದಾರೆ.

**ಪ್ರಭಾವ**

ಸಾಹಿತ್ಯದ ಯಾವುದೇ ಬದಲಾವಣೆ ಮೊದಲಿಗೆ ಕಾಣಿಸಿಕೊಳ್ಳುವುದು ಕಾವ್ಯದಲ್ಲಿಯೇ. ಈ ನವೋದಯ ಕಾವ್ಯ ವಸ್ತುವಿನ ಆಯ್ಕೆಯಲ್ಲಿ ಸ್ವಾತಂತ್ರ್ಯ ವಹಿಸಿದ್ದು ಅದರ ಪ್ರಥಮ ಬದಲಾವಣೆಯಾಗಿದೆ. ಹನ್ನೆರಡನೆಯ ಶತಮಾನದ ವಚನಕಾರರು ಒಂದು ಬಗೆಯ ಸ್ವಾತಂತ್ರ್ಯವನ್ನು ವಹಿಸಿದ್ದರೂ ಅದು ಧರ್ಮನಿರಪೇಕ್ಷವಾಗಿರಲಿಲ್ಲ. ಇಲ್ಲಿ ಮಾತ್ರ ಪ್ರಕೃತಿಯ ವರ್ಣನೆ. ಪ್ರೀತಿಯ ಸ್ಪಂದನ, ಸಾಮಾಜಿಕ ಪ್ರತಿಕ್ರಿಯೆ, ನಾಡಿನ ಹಾಗೂ ರಾಷ್ಟ್ರದ ಸ್ಥಿತಿ-ಗತಿಗಳ ವರ್ಣನೆ ಮತ್ತು ಪರಂಪರೆಯ ಅಗ್ಗಳಿಕೆ ಇತ್ಯಾದಿಗಳಲ್ಲಿ ಧರ್ಮನಿರಪೇಕ್ಷತೆ ಎದ್ದುಕಾಣುತ್ತದೆ. "ವೈಯಕ್ತಿಕ ವೈಶಿಷ್ಟ್ಯತೆಗಳ ಮೊತ್ತವೆ ನವೋದಯದ ಸ್ಥೂಲಸ್ವರೂಪ" ಎಂಬ ವಿಮರ್ಶಕರ ಮಾತೂ ಇಲ್ಲಿ ಗಮನಿಸುವಂತಹದು. ಭಾವನಿಷ್ಠತೆ ಮತ್ತು ಗೀತಗುಣಗಳಿಂದಾಗಿ ಅದು "ಭಾವಗೀತ" ಎಂಬ ಸಾರ್ಥಕವಾದ ಅಭಿದಾನವನ್ನು ಪಡೆದುಕೊಂಡಿದೆ.

ಷಟ್ಪದಿ ರಗಳೆ, ತ್ರಿಪದಿ, ಸಾಂಗತ್ಯ - ಇತ್ಯಾದಿ ಬಂಧುಗಳು ಹಿಗ್ಗುತ್ತ, ಕುಗ್ಗುತ್ತ, ಜನಪದದ ವಿವಿಧ ಗತ್ತುಗಳು ಸ್ವೀಕೃತವಾಗುತ್ತ, ಮಾರ್ಪಾಡುಗೊಳ್ಳುತ್ತ ಕನ್ನಡ ಕಾವ್ಯ ಕಣ್, ಕಿವಿ, ಮನಸ್ಸು, ಮೂರನ್ನು ತನ್ನ ಕಡೆಗೆ ಸೆಳೆದುಕೊಂಡಿತು.

---

೧. ಪ್ರೊ. ಎಲ್.ಎಸ್.ಶೇಷಗಿರಿರಾವ್‌ರ 'ಹೊಸಗನ್ನಡ ಸಾಹಿತ್ಯ ಚರಿತ್ರೆ', ಪುಟ. ೨೯.

ನವೋದಯ ಕಾವ್ಯದ ವಸ್ತು ವೈವಿಧ್ಯವನ್ನು ಒಂದು ಲೆಕ್ಕಕ್ಕೆ ಹೊಂದಿಸಿ ಹೇಳುವುದು ಕಷ್ಟದ ಕೆಲಸ. ಮಾನವ ಮನಸ್ಸು – ಹೃದಯಗಳಲ್ಲಿ ಹುಟ್ಟುವ ಊರ್ಮಿಗಳಷ್ಟು, ಪ್ರಾಪಂಚಿಕ ಜೀವನದಲ್ಲಿ ಕಂಡುಬರುವ ಸರಸ–ವಿರಸ ವಿಷಣ್ಣತೆಗಳಷ್ಟು, ಪ್ರಕೃತಿಯ ದೈನಂದಿನ ಉದಯಾಸ್ತಮಾನಗಳನ್ನು ಒಳಗೊಂಡು ಋತುಮಾನಗಳ ವಿವಿಧ ವ್ಯಾಪಾರ ಹಾಗೂ ಚೇತನಾಚೇತನದ ವಿವಿಧ ವಿನ್ಯಾಸಗಳಷ್ಟು ನಾಡಿನ – ರಾಷ್ಟ್ರದ ಪರಂಪರೆ. ಪತನ – ಪುನರುಜ್ಜೀವನಗಳ ಏರುಪೇರುಗಳಷ್ಟು ವ್ಯಾಪಕವಾಗಿದೆಯಲ್ಲದೆ ಗೌರೀಶಂಕರ ಏರುವ ತೇನಸಿಂಗ, ಚಂದ್ರಮಂಡಲದಲ್ಲಿ ಕಾಲಿಟ್ಟ ಅರ್ಮಸ್ಟ್ರಾಂಗ್ ಅಣುಬಾಂಬ್ ಶೋಧಕ ಐನ್‌ಸ್ಟೀನರ ಮಹಾನ್ ಸಾಧನೆಯೂ ಕಾವ್ಯಕ್ಕೆ ವಸ್ತುವಾಗುವಂತಾಯಿತು.

ನವೋದಯ ಕವಿಗಳು ಪ್ರಕೃತಿಯ ಉಪಾಸಕರಾಗಿದ್ದರೆಂಬುದಕ್ಕೆ ಬೇಕಾದಷ್ಟು ಉದಾಹರಣೆಗಳು ಸಿಗುತ್ತವೆ. ಬೇಂದ್ರೆಯವರ ಬೆಳಗು, ಶ್ರಾವಣ, ಯುಗಾದಿ. ಹಾಗೆಯೇ ಕುವೆಂಪು ಅವರ ಕೊಳಲು, ಕಲಾಸುಂದರಿ, ನವಿಲು, ಕವನ ಸಂಗ್ರಹಗಳಲ್ಲಿಯ ಅನೇಕ ಕವಿತೆಗಳು ನಿಸರ್ಗದ ವಿವಿಧ ವಿನ್ಯಾಸಗಳನ್ನು ಚಿತ್ರಿಸಿರುವುದನ್ನು ಸಹೃದಯರು ಬಲ್ಲರು. ಅಖಂಡವಾದ ಜೀವನ ಪ್ರೀತಿ, ಸ್ನೇಹ, ಒಲವು ನವೋದಯದ ಎಲ್ಲ ಕವಿಗಳಲ್ಲಿ ಕಾಮನಬಿಲ್ಲಿನ ಸೊಬಗಿನಂತೆ ಕಾಣಿಸಿಕೊಂಡಿದೆ. ನವಿಲುಗರಿಯ ರಂಗಿನಂತೆ ಹರವಿಕೊಂಡಿದೆ. ಬೇಂದ್ರೆ, ಕುವೆಂಪು, ಪುತಿನ, ತೀ.ನಂ.ಶ್ರೀ ಅವರನ್ನೊಳಗೊಂಡು, ನವೋದಯದ ಉಚ್ಛ್ರಾಯ ಕಾಲದಲ್ಲಿ ಕಾವ್ಯರಂಗವನ್ನು ಪ್ರವೇಶಿಸಿದ ಕೆ.ಎಸ್.ನರಸಿಂಹಸ್ವಾಮಿ, ಜಿ.ಎಸ್.ಶಿವರುದ್ರಪ್ಪ ಮತ್ತು ಚೆನ್ನವೀರಕಣವಿಯವರ ಕವಿತೆಗಳಲ್ಲಿಯೂ ಅವು ತಮ್ಮ ಸೊಗಸುಗಾರಿಕೆಯನ್ನು ಹೆಚ್ಚಿಸಿಕೊಂಡಿವೆ. ಬೇಂದ್ರೆಯವರ ಆರಂಭದ ಸಂಕಲನಗಳಾದ ಗರಿ, ಸಖೀಗೀತ, ಉಯ್ಯಾಲೆ, ನಾದಲೀಲೆ, ಈ ಸಂಕಲನಗಳಲ್ಲಿ ಪ್ರೀತಿಯನ್ನು ಪ್ರತಿನಿಧಿಸುವ ಹಲವು ಕವಿತೆಗಳು ದೊರೆಯುತ್ತವೆ. ಕುವೆಂಪು ಅವರ ಕಲಾಸುಂದರಿ, ನವಿಲು, ಪಕ್ಷಿಕಾಶಿ, ಪ್ರೇಮಕಾಶ್ಮೀರ, ಷೋಡಶಿ ಇತ್ಯಾದಿ ಕವನಸಂಗ್ರಹಗಳಲ್ಲಿ ಪ್ರೀತಿಯ ಉಕ್ಕಂದ ಇದ್ದೇ ಇದೆ.

ನವೋದಯ ಕಾವ್ಯ ಸೌಂದರ್ಯನಿಷ್ಟವಾಗಿ ರೂಪುಗೊಂಡಿದ್ದು ಮತ್ತು ಬೆಳೆದದ್ದು, ಅದರ ಲಯ, ಪದ ಪ್ರಯೋಗಗಳು ಸೌಂದರ್ಯದ ಪೋಷಕ ಸಾಮಾಗ್ರಿಗಳು. ವಸ್ತುವಿನ್ಯಾಸದಲ್ಲಿ ಭಾವದೂರ್ಮಿಗಳು ತೆರೆತೆರೆಯಾಗಿ ಪಸರಿಸುತ್ತ, ಸಹೃದಯನ ಅಂತಃಕರಣವನ್ನು ಸ್ಪರ್ಶಿಸುವುದು ಒಂದು ಸಹಜ ಕ್ರಿಯೆಯಾಗಿದೆ.

ವೈಚಾರಿಕತೆ, ವಿಡಂಬನೆ, ಸಮಾಜವಿಮರ್ಶೆ, ರಾಷ್ಟ್ರಭಕ್ತಿ ಏನಿದ್ದರೂ ಭಾವಗೀತಾತ್ಮಕ-ವಾಗಿಯೇ ಅಭಿವ್ಯಕ್ತಿಗೊಳ್ಳಬೇಕು.

ನವೋದಯ ಕಾವ್ಯ ಭಾವಗೀತ ಪ್ರಕಾರವಾಗಿದ್ದರೂ ವಸ್ತು ವೈವಿಧ್ಯಕ್ಕೆ ಅಲ್ಲಿ ಕೊರತೆಯಿಲ್ಲ. ಪ್ರಕೃತಿಗೀತೆಗಳು, ಪ್ರೇಮಗೀತೆಗಳು, ಕೌಟುಂಬಿಕ ಗೀತೆಗಳು, ಸಾಮಾಜಿಕ ಗೀತೆಗಳು, ನಾಡಗೀತೆಗಳು, ದೇಶಭಕ್ತಿಗೀತೆಗಳು, ಗಣ್ಯವ್ಯಕ್ತಿಗೀತೆಗಳು, ತತ್ತ್ವಚಿಂತನಾ ಗೀತೆಗಳು, ಆಧ್ಯಾತ್ಮ ಗೀತೆಗಳು ಹೀಗೆ ವರ್ಗೀಕರಿಸಿ ಅಧ್ಯಯನ ಮಾಡಲು ಅವಕಾಶವಿದೆ. ಅಲ್ಲಿ ವೀರಗೀತೆಗಳು, ಶೋಕಗೀತೆಗಳು, ಹಾಸ್ಯಗೀತೆಗಳು ಉಂಟು.

ಕೀರ್ತಿನಾಥ ಕುರ್ತಕೋಟಿಯವರು ಹೇಳಿದಂತೆ "ಜೀವನದಲ್ಲಿಯ ಒಂದು ರಸನಿಮಿಷ, ಪ್ರಕೃತಿಯ ಒಂದು ರಮ್ಯವಿವರ, ದುರ್ದಮ್ಯವಾಗಿ ಉಕ್ಕಿಬರುವ ಒಂದು ಭಾವನೆ, ಅಪೂರ್ವವಾಗಿ ಸಣ್ಣ ಘಟನೆ ಇವೇ ಕೇಂದ್ರಬಿಂದುವಾಗಿ ತನಗನುಕೂಲವಾದ ಛಂದಸ್ಸು, ಭಾಷೆ, ಅಲಂಕಾರಗಳಲ್ಲಿ ಉಚಿತವಾಗಿ ಅಭಿವ್ಯಕ್ತಿಯನ್ನು ಪಡೆದು ಗೀತವಾಗಿ ಬರಬಹುದೆಂಬ ಮಾತು ಹೊಸದಾಗಿತ್ತು".[೧] ಈ ಹೊಸತನದಲ್ಲಿಯೇ ಹಲವಾರು ಕವಿಗಳು ನೂತನವಾದ ಕಾವ್ಯಸೃಷ್ಟಿಯನ್ನು ಮಾಡಿದರು. ಅದು ವಿಪುಲವಾಗಿ, ವೈವಿಧ್ಯಪೂರ್ಣವಾಗಿ ಬೆಳೆಯಿತು. ಸುದೈವದಿಂದ ಹಲವಾರು ಪ್ರತಿಭಾವಂತ ಕವಿಗಳು ಮೂಡಿಬಂದದ್ದರಿಂದ ನವೋದಯ ಕಾವ್ಯ ಹೊಸಗನ್ನಡ ಸಾಹಿತ್ಯದ ಬಹುದೊಡ್ಡ ಕೊಡುಗೆಯಾಯಿತು. ಆ ಮುಂದೆ ಹೊಸ ತಿರುವುಗಳೇನೋ ಬಂದವು. ಆದರೆ ನವೋದಯವನ್ನು ಮೀರಿಸುವಂಥ ಸಾಧನೆ ಮಾತ್ರ ನಡೆಯಲಿಲ್ಲ.

**ನವೋದಯ ಸಾಹಿತ್ಯದ ಲಕ್ಷಣಗಳು**

- ಪ್ರಮುಖವಾದ ಸಾಹಿತ್ಯ ಪ್ರಕಾರ ಭಾವಗೀತೆ.
- ಜೀವನ ಸ್ವೀಕಾರಾರ್ಹ ಎಂಬ ನಂಬಿಕೆ ಮತ್ತು ಕೆಲವು ವೈಕಲ್ಯಗಳ ಸ್ವೀಕಾರ.
- ಆಧ್ಯಾತ್ಮಿಕ.
- ಪ್ರಕೃತಿಪ್ರೇಮ ಮತ್ತು ಮನುಷ್ಯ ಸಂಬಂಧ ಗಾಢತೆ ಕಂಡುಬರುತ್ತದೆ.
- ಭೂತ ಜಗತ್ತಿಗಿಂತ ವಿಚಾರ ಜಗತ್ತಿಗೆ ಪ್ರಾಮುಖ್ಯತೆ.
- ಸಾಮಾನ್ಯ ಜನರ ಬದುಕು ಕಾವ್ಯದ ವಸ್ತುವಾಗಬೇಕು.

---

೧. ಡಾ. ಗುರುಲಿಂಗ ಕಾಪಸೆ ಅವರ ಕನ್ನಡ ನವೋದಯ ಸಾಹಿತ್ಯ ಘಟ್ಟ, ಪುಟ. ೫೨.

- ಜೀವನೋತ್ಸಾಹ
- ನವೋದಯ ಸಾಹಿತ್ಯದಲ್ಲಿ ಧಾರ್ಮಿಕ ಮತಧರ್ಮಗಳಿಗಿಂತ ಭಿನ್ನವಾದ ಉದಾರವಾದ ಮಾನವತಾ ವಾದಿ ನಿಲುವನ್ನು ಹೊಂದಿತು.
- ರಾಷ್ಟ್ರೀಯ ಪರಿಕಲ್ಪನೆ ಹಾಗೂ ನಾಡುನುಡಿಗಳ ಬಗೆಗಿನ ಉತ್ಸಾಹ ಕಂಡುಬರುತ್ತದೆ.
- ಕನಸುಗಾರಿಕೆ, ಆಶಾವಾದಿತನ, ಭ್ರಮಾತ್ಮಕತೆ, ನಿಸರ್ಗ, ಪ್ರೀತಿ ಸಾಮಾನ್ಯವಾಗಿ ಕಂಡುಬರುತ್ತದೆ.

ಈ ಯುಗದ ಸಾಹಿತ್ಯವನ್ನು ಅಭ್ಯಾಸ ಮಾಡುವ ಮುನ್ನ ಒಂದು ಅಂಶವನ್ನು ಗಮನಿಸಬಹುದು. ಈ ಯುಗ ಪ್ರತಿಭಟನೆಯಿಂದ ಹುಟ್ಟಲಿಲ್ಲ. ಕವಿಗಳ ವಿರುದ್ಧದ ದಂಗೆಯ ಬಾವುಟವನ್ನು ಏರಿಸಲಿಲ್ಲ. ಇದು ಏರಿಸಿದ್ದು ಕನ್ನಡ ಬಾವುಟವನ್ನು

> ಮಾನವನ ದೇವತೆಗೆ ತಂದ ಜಿನಭಕ್ತರು
> ಹಂಪೆಯ ವಿರೂಪಾಕ್ಷಪುತ್ರರು, ವಿರಕ್ತರು
> ವೀರನಾರಾಯಣನ ಕೃಪೆಯೊಳಾಸಕ್ತರು
> . . . . . . . . . . . . . . . . . . . . .
> . . . . . . . . . . . . . . . . . . . . .
> ನಮ್ಮಯ ತಾಯಣುಗರು
> ಪಂಪನೋ, ರನ್ನನೋ, ಬಸವನೋ, ಮಾಧವನೋ
> ಆ ಅಕ್ಕಮಹಾದೇವಿ, ನಾರಣಪ್ಪ, ಚಿಕ್ಕದೇವ

ಎಲ್ಲರೂ ಹಿಡಿದ ಕನ್ನಡ ಬಾವುಟವನ್ನು

ಶ್ರೀಯವರಿಂದ ಹಿಡಿದು ನವೋದಯದ ಸೃಜನ ಸಾಹಿತಿಗಳು – ವಿಮರ್ಶಕರೆಲ್ಲ ಪಂಪನಿಂದ ಪಂಜೆಯವರವರೆಗೆ ತಮ್ಮ ಹಿಂದಿನ ಅತಿರಥ ಮಹಾರಥರಿಗೆ ನಮಿಸಿ ಮುಂದೆ ಹೆಜ್ಜೆ ಇಟ್ಟವರು.

"ನವೋದಯ ಸಾಹಿತ್ಯದಲ್ಲಿ ದಟ್ಟ, ನಿರಾಸೆ, ಸಿನಿಸಿಸಂ (ಎಲ್ಲದರಲ್ಲಿಯೂ ಎಲ್ಲ ವಸ್ತುಗಳಲ್ಲಿಯೂ ದೋಷವನ್ನೇ ಕಾಣುವ ಎಲ್ಲವನ್ನೂ ಪರಿಹಾಸ್ಯ ಮಾಡುವ ಮನೋಭಾವ) ಎಲ್ಲಿಯೂ ಕಾಣುವುದಿಲ್ಲ."[೧] ಬಾಳು ಸ್ವೀಕಾರಾರ್ಹವೆ ಎಂಬ ಪ್ರಶ್ನೆಗೆ

---

೧. ಪ್ರೊ. ಎಲ್.ಎಸ್.ಶೇಷಗಿರಿರಾವ್‌ರ 'ಹೊಸಗನ್ನಡ ಸಾಹಿತ್ಯ ಚರಿತ್ರೆ', ಪುಟ. ೪೪.

ಈ ಸಾಹಿತ್ಯದಲ್ಲೆಲ್ಲ ಸಿಕ್ಕುವುದು ಒಂದೇ ಉತ್ತರ. 'ಹೌದು', ಮೂಲತಃ ಬಾಳು ಅರ್ಥಪೂರ್ಣ ಎಂಬುದರಲ್ಲಿ ಈ ಸಾಹಿತ್ಯಕ್ಕೆ ಸಂಶಯವೇ ಇಲ್ಲ. ಎಂದರೆ, ಈ ಕಾಲದ ಸಾಹಿತ್ಯ ಬಾಳಿನ ದೋಷಗಳಿಗೆ, ಕಹಿ ಅನ್ಯಾಯಗಳಿಗೆ ಕುರುಡಾಯಿತು ಎಂದು ಅರ್ಥವಲ್ಲ. ಕಟುಟೀಕೆ, ವಿಡಂಬನೆ, ಪ್ರತಿಭಟನೆ ಎಲ್ಲ ಇಲ್ಲಿ ಕಾಣುತ್ತದೆ.

ಈ ಕಾಲದ ಸಾಹಿತ್ಯದ ಭಾಷೆಯ ಬಳಕೆಯಲ್ಲಿ ಅನೇಕ ಲೋಪದೋಷಗಳನ್ನು ತೋರಿಸಬಹುದು. ಮಾತುಗಳ ಅರ್ಥವ್ಯಾಪ್ತಿ ನಿಖರವಾಗಿಲ್ಲದಿರುವುದು, ಅತಿಭಾವುಕತೆ, ಆವೇಶದಿಂದ ಉತ್ಪ್ರೇಕ್ಷೆಯ ಮಾತುಗಳನ್ನು ಬಳಸುವುದು, ಪುನರಾವೃತ್ತಿ – ಒಟ್ಟಿನಲ್ಲಿ ಬೆಳೆಯುವ ಅನುಭವವನ್ನು ಅಪ್ಪಿಕೊಂಡಿಲ್ಲದ ಭಾಷೆ, ಎಲ್ಲಕ್ಕೂ ಈ ಕಾಲದ ಹಿರಿಯ ಸಾಹಿತಿಗಳ ಸೃಷ್ಟಿಯಿಂದಲೇ ನಿದರ್ಶನಗಳನ್ನು ಕೊಡಬಹುದು. ಕಾವ್ಯಾನುಭವಗಳ ಅಭಿವ್ಯಕ್ತಿಯಾಗದ ಬರಿಯ ಹೇಳಿಕೆಗಳಾಗುವ ಪಂಕ್ತಿಗಳು ಕಾವ್ಯದಲ್ಲಿ, ಪೂರ್ವನಿರ್ಮಿತ ಭಾಷಣಗಳು ನಾಟಕ – ಕಾದಂಬರಿ – ಕಥೆಗಳಲ್ಲಿ ಸೇರಿಕೊಳ್ಳುವುದುಂಟು ಎಂದು ಪ್ರೊ. ಎಲ್.ಎಸ್.ಶೇಷಗಿರಿರಾವ್ ಅವರು ಹೇಳಿದ್ದಾರೆ.

ಇದಿಷ್ಟನ್ನು ಹೇಳಿಯೂ ಅಗತ್ಯವಾಗಿ ಗುರುತಿಸಬೇಕಾದ ಅಂಶಗಳಿವೆ. ಈ ಕಾಲದಲ್ಲಿ ಪ್ರಯತ್ನದ ಅರಿವು ಇಲ್ಲದೆ, ಹೆಚ್ಚು 'ಥಿಯರಿ' ಇಲ್ಲದೆ ಸಾಹಿತ್ಯ ಸೃಷ್ಟಿಯಾದದ್ದು ಒಳ್ಳೆಯದಾಯಿತು. ಸಾಹಿತ್ಯ ಕೃತಿಗಳನ್ನು ಓದುವವರ ವೃತ್ತ ಹಿಗ್ಗಿತು. ಯಾವ ಪ್ರಯೋಗಗಳನ್ನೇ ಮಾಡಲಿ ಬಹುಸಂಖ್ಯಾತ ಓದುಗ ವರ್ಗದೊಡನೆ ಸಂಪರ್ಕ ಕಳೆದುಕೊಳ್ಳಲಿಲ್ಲ ಎನ್ನುವುದು ಗಮನಾರ್ಹವಾದ ಮಾತು.

ನವೋದಯ ಸಾಹಿತ್ಯದ ಒಂದು ಬಹುಮುಖ್ಯ ಆಯಾಮವನ್ನು ಇಲ್ಲಿ ಗುರುತಿಸಬೇಕು. "ಈ ಸಾಹಿತ್ಯ ರೂಪ ತಾಳಿದ್ದು ಎರಡು ಸಂಸ್ಕೃತಿಗಳ ಮುಖಾಮುಖಿಯಾದುದ್ದರ ಪರಿಣಾಮಗಳು ಜನಕ್ಕೆ ಅನುಭವವಾಗುತ್ತಿದ್ದ ಕಾಲದಲ್ಲಿ ಬೇರೊಂದು ದೇಶವು ನಮ್ಮ ಸ್ವಾತಂತ್ರವನ್ನು ಕಿತ್ತುಕೊಂಡು ನಾವು ಗುಲಾಮರಾದುದರ ಪರಿಣಾಮಗಳು ಕಾಣಿಸಿಕೊಳ್ಳತೊಡಗಿದ ಕಾಲದಲ್ಲಿ (ಇದನ್ನು ಈಚೆಗಿನ ದಿನಗಳಲ್ಲಿ ವಸಾಹತು ಅನುಭವ ಎನ್ನುತ್ತಾರೆ) ಇವುಗಳಲ್ಲಿ ಒಂದೇ ಪ್ರಕ್ರಿಯೆಯಾದರೂ ಒಂದು ದೇಶದ ಇತಿಹಾದಲ್ಲಿ ಅತ್ಯಂತ ಮಹತ್ವದ ಪ್ರಕ್ರಿಯೆ. ಎರಡೂ ಏಕಕಾಲದಲ್ಲಿ ಭಾರತದಲ್ಲಿ ಸಂಭವಿಸಿದವು."[೧] ಕನ್ನಡಿಗರ ಮಟ್ಟಿಗೆ ಇವೆರಡನ್ನೂ ಸಾಹಿತ್ಯದಲ್ಲಿ ಸ್ವೀಕರಿಸಿ ಬದುಕಿನ ಸಂದರ್ಭದಲ್ಲಿಟ್ಟುಕೊಂಡ ಸಾಧನೆ ನವೋದಯ ಸಾಹಿತ್ಯದ್ದು.

---

೧. ಪ್ರೊ. ಎಲ್.ಎಸ್.ಶೇಷಗಿರಿರಾವ್‌ರ 'ಹೊಸಗನ್ನಡ ಸಾಹಿತ್ಯ ಚರಿತ್ರೆ', ಪುಟ. ೬೦.

ನವೋದಯ ಸಾಹಿತ್ಯಕ್ಕೆ ಬಹುಮುಖ್ಯ ಪ್ರೇರಣೆಯಾಗಿ ಗಮನಿಸಬೇಕಾದದ್ದು ಕರ್ನಾಟಕ ಏಕೀಕರಣದ ಒಂದು ಸಂದರ್ಭವನ್ನು ನವೋದಯ ಕಾಲದ ಕವಿಗಳು ಕಾವ್ಯ ಬರೆಯಲು ಆ ಕಾಲದಲ್ಲಿ ನಡೆಯುತ್ತಿದ್ದಂತಹ ಕರ್ನಾಟಕ ಏಕೀಕರಣ ಚಳುವಳಿ ಕವಿಗಳ ಮೇಲೆ ಗಾಢವಾದ ಪರಿಣಾಮವನ್ನು ಬೀರಿದವು. ಕುವೆಂಪು, ಬೇಂದ್ರೆ, ಮಾಸ್ತಿ – ಹೀಗೆ ಹಲವಾರು ಸಾಹಿತಿಗಳು ತಮ್ಮದೇ ಆದ ಶೈಲಿಯಲ್ಲಿ ಅಖಂಡ ಕರ್ನಾಟಕದ ಒಂದು ಕಲ್ಪನೆಯನ್ನು ತಂದುಕೊಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಏಕೀಕರಣ ಚಳುವಳಿ ಹಿನ್ನೆಲೆ, ಅದಕ್ಕೆ ಸಿಕ್ಕಂತಹ ಪ್ರೇರಣೆ ಪ್ರಭಾವಗಳನ್ನು ಗಮನಿಸಬಹುದು.

ಭಾರತದ ಸ್ವಾತಂತ್ರ್ಯ, ಕರ್ನಾಟಕ ಏಕೀಕರಣ ಇವು ಕನ್ನಡಿಗರ ಜೀವನದಲ್ಲಿ ಸಂಭವಿಸಿದ ಎರಡು ಮಹತ್ವದ ಸಂದರ್ಭಗಳು. ೧೯೫೬ಕ್ಕೆ ಮೊದಲು ಭಾರತದ ಭೂಪಟದಲ್ಲಿ "ಕರ್ನಾಟಕ ಹೆಸರಿನ ರಾಜ್ಯವೇ ಇರಲಿಲ್ಲ. ಮಾಯವಾಗಿದ್ದ ಅದು, ಮೂಡಿಬರಲು ನಡೆಸಿದ ಹೋರಾಟ, ಅದರ ಹಿಂದಿರುವ ಸೋಲು–ಗೆಲುವುಗಳ ಕಥೆ–ವ್ಯಥೆ ಈ ಒಂದು ಅಧ್ಯಾಯದ ವಸ್ತು. ಒಂದು ಅಧ್ಯಾಯದಲ್ಲಿ ಹರಡಿಕೊಂಡಿರುವ ಇಲ್ಲಿಯ ಬರವಣಿಗೆಯ ವ್ಯಾಪ್ತಿ ಕರ್ನಾಟಕ ಏಕೀಕರಣದ ಹಿನ್ನೆಲೆ ಪ್ರೇರಣೆ ಮತ್ತು ಪ್ರಭಾವ ಈ ಕೃತಿಯ ವೈಶಿಷ್ಟ್ಯವಾಗಿದೆ.

ಕನ್ನಡಿಗರ ಬಾಳಿನಲ್ಲಿ ಏಕೀಕೃತ ಕರ್ನಾಟಕವೆಂಬ ಪ್ರಾಂತ್ಯ ನಿರ್ಮಾಣವಾದುದು ಒಂದು ಅದ್ಭುತ ಚಾರಿತ್ರಿಕ ಪವಾಡ. ಇಂಥ ಕಲ್ಪನೆಯೂ ಸಾಧ್ಯವಾಗದಿದ್ದಂಥ ರಾಜಕೀಯ ಅವ್ಯವಸ್ಥೆಯಲ್ಲಿದ್ದಿತು ಜನತೆ. ಸಂಪೂರ್ಣವಾಗಿ ಶಾಂತಿಯುತವಾದ ಹೋರಾಟದಿಂದಲೇ ಏಕೀಕರಣವನ್ನು ಸಾಧಿಸಿದ ನಮ್ಮ ನಾಡಿನ ಹಿರಿಯರ ವಿವೇಕವನ್ನು ಎಷ್ಟು ಹೊಗಳಿದರು ಸಾಲದು. ಹೀಗೆ ಒಟ್ಟಾದ ಕನ್ನಡಿಗರ ಬಾಳಿನಲ್ಲಿ ಕಳೆದ ಐವತ್ತು ವರ್ಷಗಳಲ್ಲಿ ಆಗಿರುವ ಬೆಳವಣಿಗೆ ಸಾಧಾರಣವಾದುದ್ದೇನೂ ಅಲ್ಲ. ನಿಧಾನವಾಗಿ ಆದರೂ ನಿಶ್ಚಿತವಾಗಿ ಕನ್ನಡ ಜನಾಂಗದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಬೇಕಾದಷ್ಟು ಬೆಳವಣಿಗೆಗಳಾಗಿವೆ.

ಕರ್ನಾಟಕ ಏಕೀಕರಣ ಇತಿಹಾಸ ನಾಲ್ಕು ಕೋಟಿ ಕನ್ನಡಿಗರ ಸಾಂಸ್ಕೃತಿಕ ಅಸ್ಮಿತೆಯ ಹೋರಾಟದ ಕತೆ ೧೬ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಪತನದ ನಂತರವೇ, ಒಂದೇ ಆಡಳಿತೆಯಡಿ ಇರಬೇಕಾದ ಭೌಗೋಳಿಕ ಐಕ್ಯ, ಸಾಂಸ್ಕೃತಿಕ ಜೀವಂತತೆಗೆ ಮುಖ್ಯವೆಂಬ ಮಾತನ್ನು ಮತ್ತೆ ನಾವು ನೆನಪಿಸಿಕೊಳ್ಳ–ತೊಡಗಿದ್ದು ಕನ್ನಡದ ಬುದ್ಧಿಜೀವಿಗಳನ್ನು, ಸಾಹಿತಿಗಳನ್ನು ಈ ವಿಚಾರ

ಕಾಡತೊಡಗಿದಾಗ, ಇತರ ಭಾಷಾ ವಲಯಗಳ ಅಧಿಕಾರಶಾಹಿ ಪ್ರವೃತ್ತಿಯಿಂದ ಕನ್ನಡಕ್ಕೆ ಬಿಡುಗಡೆಬೇಕೆಂದು ಛಲದಿಂದ ಹೋರಾಡಿದ ಹಲವಾರು ಹಿರಿಯರ ಸಾಹಸ ನಮ್ಮ ಕಣ್ಣು ತೆರಸಿದಾಗ, ಹತ್ತು ಹಲವು ಸಂಸ್ಥಾನಗಳಲ್ಲಿ ಅಂದಿನ ಬ್ರಿಟಿಷ್ ಇಂಡಿಯಾದ ಬೇರೆ ಬೇರೆ ಪ್ರಾಂತಗಳಲ್ಲಿ ಹಂಚಿಹೋಗಿದ್ದ ಕರ್ನಾಟಕದ ಭಾಗಗಳೆಲ್ಲ ಒಂದೇ ರಾಜಕೀಯ ಆಡಳಿತೆಯಡಿ ಬಂದು ಜನಸಾಮಾನ್ಯರ ಭಾಷೆ, ಜನಸಾಮಾನ್ಯರ ಆಡಳಿತವನ್ನೂ, ಶಿಕ್ಷಣ ಸಂಸ್ಕೃತಿಗಳನ್ನು ರೂಪಿಸಲು ನೆರವಾಗಬೇಕು ಎಂಬ ಆಸೆಯೇ ಕರ್ನಾಟಕ ಏಕೀಕರಣ ಚಳವಳಿಯ ಹುಟ್ಟಿಗೆ ಕಾರಣವಾಗಿದೆ.

"ಈ ಹಿನ್ನೆಲೆಯಲ್ಲಿ ಭಾರತದ ಯಾವ ಭಾಷಾಪ್ರಾಂತಕ್ಕೂ ಒದಗದಿದ್ದ ದೌರ್ಭಾಗ್ಯ ಕರ್ನಾಟಕಕ್ಕೆ ಒದಗಿಬಂತು. ಇದಕ್ಕೆ ಮುಖ್ಯ ಕಾರಣ ನಮ್ಮ ಚರಿತ್ರೆಯಲ್ಲಿ ಕರ್ನಾಟಕದ ಒಂದು ಭಾಗದ ಆಡಳಿತವೇ ಮತ್ತೊಂದು ಆಡಳಿತದ ಮೇಲೆ ಆಕ್ರಮಣ ಮಾಡಿ ಸೋತೋ ಗೆದ್ದೋ ಎರಡು ಕಡೆಗೂ ಹಿಂಸೆ, ಆತಂಕ, ದಾರಿದ್ರ್ಯಗಳನ್ನು ತಂದುಕೊಂಡ ದುರಂತದ ಕಥೆ."[೧] ಜೊತೆಗೆ ನಮ್ಮ ದೀರ್ಘಚರಿತ್ರೆಯಲ್ಲಿ ಕನ್ನಡ ನಾಡೆಂಬುದು ಯಾವಾಗಲೂ ಸಂಪೂರ್ಣವಾಗಿ ಒಂದಾಗಿಲ್ಲ. ಈಗ ಸಿಗುವ ಅಲ್ಪಸ್ವಲ್ಪ ದಾಖಲೆಗಳ ಬಲದ ಮೇಲೆ ಕದಂಬರು ಕರ್ನಾಟಕದ ಉತ್ತರ ಭಾಗದ ಪ್ರದೇಶವನ್ನು ಸು. ೨ ಶತಮಾನಗಳವರೆಗೆ ಆಳಿದರೆಂದು ಹೇಳಬಹುದು. ಅದೇ ಕಾಲದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಗಂಗರು ಆಡಳಿತವನ್ನು ನಡೆಸಿದರು. ಅಂದರೆ ಆ ಕಾಲದಲ್ಲಿಯೇ ಕರ್ನಾಟಕ ಎರಡು ಹೋಳಾಗಿದ್ದುದ್ದು ಸ್ಪಷ್ಟ. ಮುಂದೆ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿಯ ಚಾಲುಕ್ಯರು, ಕಲುಚುರ್ಯರು, ಹೊಯ್ಸಳರು ಮುಂತಾದ ರಾಜರು ಅನಿರ್ದಿಷ್ಟವಾದ ಕನ್ನಡ ನಾಡಿನೆಲ್ಲೆಗಳುಳ್ಳ ರಾಜ್ಯವನ್ನು ಆಳಿದರು. ವಿಜಯನಗರ ಕಾಲದಲ್ಲಿಯೇ ಕರ್ನಾಟಕದ ದೊಡ್ಡ ಭಾಗವು ಒಂದು ರಾಜ ಮನೆತನದ ಆಡಳಿತಕ್ಕೆ ಒಳಗಾದದ್ದು. ಬಳಿಕ ಮೈಸೂರು ಅರಸರು ನೆಲೆ ನಿಂತ ಮೇಲೆ ಬ್ರಿಟಿಷರ ಅಧೀನರಾಗಿ ಮೈಸೂರಿನಿಂದ ಒಂದು ಸಂಸ್ಥಾನ ಒಳ್ಳೆಯ ಆಡಳಿತವನ್ನು ಪಡೆಯಿತು. ಆದರೆ ಮಿಕ್ಕ ಉತ್ತರ ಕನ್ನಡ, ದಕ್ಷಿಣ ಕನ್ನಡದ ದೊಡ್ಡ ಭಾಗ ಇತರ ಆಡಳಿತಗಳಿಗೆ ಸಿಕ್ಕಿ ತುಂಬ ಅವಮಾನವನ್ನೂ, ಹಿಂಸೆಯನ್ನೂ ಅನುಭವಿಸಬೇಕಾಯಿತು.

ಮೈಸೂರು ಸಂಸ್ಥಾನದಲ್ಲಿ ವಾಸಿಸುತ್ತಿದ್ದ ಸಾಮಾನ್ಯರಿಗೆ ಏಕೀಕರಣದ ಆಲೋಚನೆಯೇ ಇರಲಿಲ್ಲ. ಪ್ರಜಾಸೌಖ್ಯವನ್ನು ಗಮನಿಸುತ್ತಿದ್ದ ರಾಜರು ಚೆನ್ನಾಗಿ

೧. ಪ್ರೊ. ಜಿ.ವೆಂಕಟಸುಬ್ಬಯ್ಯರ 'ಕರ್ನಾಟಕ ಏಕೀಕರಣದ ಅನುಭವಗಳು', ಪುಟ. ೩೦.

ಆಡಳಿತವನ್ನು ನಡೆಸುತ್ತಿದ್ದುದರಿಂದ ರಾಜಕೀಯವಾಗಿ ಸಾಮಾನ್ಯರು ಈ ಆಲೋಚನೆಯನ್ನೇ ಮಾಡಲಿಲ್ಲ. ಆದರೆ ಉತ್ತರ ಕರ್ನಾಟಕದ ಜನತೆಗೆ ಕನ್ನಡದ ವಿದ್ಯಾಭ್ಯಾಸವು ದೊರಕದ ಸ್ಥಿತಿಯಲ್ಲಿ ಮರಾಠಿಯನ್ನು ತಲೆಯ ಮೇಲೆ ಹೇರುವ ಒತ್ತಾಯವೂ ಜೊತೆಗೆ ಅವಮಾನವೂ ಕಾಡುತ್ತಿತ್ತು. ಅಲ್ಲಿಯ ಪ್ರಜ್ಞಾವಂತರ ಕೈಯಲ್ಲಿ ಈ ಸ್ಥಿತಿಯನ್ನು ಬದಲಾಯಿಸಬೇಕೆಂಬ ಅಂತರಂಗದ ಒತ್ತಾಯ ಕೆಲಸ ಮಾಡಿಸಿತು. ಕನ್ನಡ ಭಾಷಿಕರೇ ಅಧಿಕವಾಗಿದ್ದ ಪ್ರಾಂತ್ಯಗಳು ಬ್ರಿಟಿಷ್ ಆಡಳಿತದಲ್ಲಿ ೨೦ ಘಟಕಗಳಲ್ಲಿ ಹಂಚಿಹೋಗಿದ್ದವು.

ಇನ್ನೂ ಕನ್ನಡದ ಪರಿಸ್ಥಿತಿ ಹೇಗಿತ್ತೆಂದರೆ, ಕನ್ನಡದ ಬಗೆಗೆ ಕನ್ನಡಿಗರಿಗೇ ಪ್ರೀತಿಯಿರಲಿಲ್ಲ. ಅದು ಯಾವ ಮಟ್ಟಿಗೆ ಇತ್ತೆಂದರೆ ಕನ್ನಡ ಭಾಷೆಯ ಆಮಂತ್ರಣ ಪತ್ರಿಕೆಗಳು ಮರಾಠೀ ಲಿಪಿಯಲ್ಲಿ ಮುದ್ರಿತವಾಗುತ್ತಿದ್ದವು. ಮಾತ್ರವಲ್ಲದೆ ಕನ್ನಡಿಗರ ಆಹ್ವಾನ ಪತ್ರಿಕೆಗಳು ಮರಾಠಿ ಭಾಷೆ ಮತ್ತು ಲಿಪಿಯಲ್ಲಿರುತ್ತಿದ್ದವು.

"೧೮೬೫ರಲ್ಲಿ ಡಬ್ಲ್ಯು.ಎ.ರಸೆಲ್ ಅವರು ಬೊಂಬಾಯಿ ಪ್ರಾಂತ್ಯದ ದಕ್ಷಿಣ ಭಾಗಗಳ ಶಿಕ್ಷಣಾಧಿಕಾರಿಯಾಗಿ ನೇಮಕಗೊಂಡು ಕನ್ನಡ ಶಿಕ್ಷಣದ ಪ್ರಗತಿಗೆ ಶ್ರಮಿಸಿದ್ದನ್ನು ಗಮನಿಸಬಹುದು. ಅವರ ಒಂದು ಪ್ರೇರಣೆಯ ಹಿನ್ನೆಲೆಯಲ್ಲಿಯೇ ಸಾರ್ಥಕತೆ ಪಡೆದ ಗಣ್ಯರೆಂದರೆ ಡೆಪ್ಯೂಟಿ ಚೆನ್ನಬಸಪ್ಪನವರು, ರೊದ್ದ ಶ್ರೀನಿವಾಸರಾಯರು, ಹುಯಿಲಗೋಳ ಭುಜಂಗರಾಯರು ಮತ್ತು ರಾ.ಹ.ದೇಶಪಾಂಡೆ ಅವರು. ಆದರೆ ಬ್ರಿಟಿಷ್ ಸರ್ಕಾರ ರಸೆಲ್ಲರ ಕನ್ನಡದ ಬಗೆಗಿನ ಕಳಕಳಿಯನ್ನು ಗ್ರಹಿಸದೇ, ಅವರ ನಂತರ ಕರ್ನಾಟಕದ ಭಾಗಗಳಿಗೆ ಮರಾಠೀ ಶಿಕ್ಷಣಾಧಿಕಾರಿಗಳನ್ನೇ ನೇಮಿಸಿ ಆವರೆಗಿನ ಕೆಲಸವನ್ನು ವಿಫಲಗೊಳಿಸಿತು."[೧]

ಈ ಹಿನ್ನೆಲೆಯಲ್ಲಿ ಕನ್ನಡ ಮಾತನಾಡುವ ಜನರು ಅಧಿಕವಾಗಿರುವ ಪ್ರದೇಶಗಳನ್ನು ಒಂದೇ ಆಡಳಿತ ಪ್ರಾಂತ್ಯವಾಗಿ ಹೊಂದಿರಬೇಕೆಂಬ ಹಂಬಲವು ಮೊಟ್ಟಮೊದಲಿಗೆ ಪ್ರಕಟವಾಗಿರುವುದು ಒಬ್ಬ ಬ್ರಿಟಿಷ್ ಅಧಿಕಾರಿಯಿಂದ ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ಬ್ರಿಟಿಷರದು ಒಡೆದು ಆಳುವ ನೀತಿ' ಎಂಬುದು ಒಪ್ಪಿತವಾದ ಮಾತಾಗಿರುವುದಾದರೂ, ಅದರಲ್ಲೂ ಕೆಲವು ಅಧಿಕಾರಿಗಳು, ಆ ಮಾತಿಗೆ ವಿನಾಯಿತಿಯನ್ನು ರಾಜ್ಯವನ್ನು ಗೆಲ್ಲಬೇಕಾದ ಪರಿಸ್ಥಿತಿಯಲ್ಲಿ ಬಳಸಿಕೊಳ್ಳದೇ ಇದ್ದುದು

೧. ಡಾ. ಹೆಚ್.ಎಸ್.ಗೋಪಾಲರಾವ್, ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೫೮.

ಸುಳ್ಳಲ್ಲ. ಆಕ್ರಮಿಸುವಾಗಿನ ನೀತಿಯನ್ನು ಕೆಲವು ಅಧಿಕಾರಿಗಳಾದರೂ ಆಳುವಾಗ ಅನುಸರಿಸಲಿಲ್ಲ.

"೧೮೦೦ರ ಸುಮಾರಿನಲ್ಲಿ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ ಆಗಿದ್ದ ಸರ್ ಥಾಮಸ್ ಮನ್ರೋ ಯುದ್ಧಗಳಲ್ಲಿ ಪರಾಕ್ರಮಕ್ಕೆ ಹೆಸರಾದಂತೆ ಆಡಳಿತದಲ್ಲಿ ದಕ್ಷತೆ ಮತ್ತು ವಿಚಕ್ಷಣತೆಗೂ ಹೆಸರು ಪಡೆದವನು. ಮುಂಬಯಿ ಅಧಿಪತ್ಯಕ್ಕೆ ಸೇರಿದ್ದ ಕನ್ನಡ ಭಾಗಗಳ ಬಗ್ಗೆ ೧೮೨೬ರ ವೇಳೆಗಾಗಲೇ ಮನ್ರೋಗಿದ್ದ ಆಲೋಚನೆಗಳನ್ನು ಹೀಗೆ ದಾಖಲಿಸಲಾಗಿದೆ.

"ಈ ಪ್ರದೇಶಗಳನ್ನು ಮದರಾಸು ಆಡಳಿತಕ್ಕೆ ವರ್ಗಾಯಿಸುವುದರಿಂದ ಅಲ್ಲಿ ಹಳೆಯ ಮರಾಠರ ಆಳ್ವಿಕೆಯ ನೆನಪು ಉಳಿಯದಂತೆ ಮಾಡಲು ಸಾಧ್ಯವಾಗುತ್ತದೆ. ಈ ಪ್ರದೇಶಗಳಲ್ಲಿ ಪ್ರಭಾವಶಾಲಿಗಳಾದವರು ಕೊಂಕಣದ ಜನ; ಬಹುಸಂಖ್ಯಾತ ಕನ್ನಡಿಗರ ಆಶೋತ್ತರಗಳನ್ನು ಗಮನಕ್ಕೆ ತಂದುಕೊಳ್ಳಲಾರದೆ ಅಲ್ಪಸಂಖ್ಯಾತರಾದ ಆಗಂತುಕರು ಕೃಷ್ಣಾನದಿಯನ್ನು ದಾಟಿ ಬಂದು ನೆಲಸಿ, ಜಹಗೀರುದಾರುರಾಗಿ ಜರ್ಬು ಮಾಡಿದವರು. ಈಗ ಹೇಗೂ ಈ ಪ್ರದೇಶ ಮದರಾಸಿನ ದಂಡಿನ ವಶದಲ್ಲಿದೆ. ಆಡಳಿತವು ಸುಗಮವಾಗುತ್ತದೆ. ಧಾರವಾಡ ಜಿಲ್ಲೆಯ ಪೂರ್ವಕ್ಕೂ ಪಶ್ಚಿಮಕ್ಕೂ ಮದರಾಸಿನ ಜಿಲ್ಲೆಗಳು ಹೊಂದಿಕೊಂಡಿವೆ. ಆದ್ದರಿಂದ ಆಡಳಿತ ಸೌಕರ್ಯಕ್ಕೋಸ್ಕರ ಈ ವರ್ಗಾವಣೆ ವಿಹಿತವಾದದ್ದು. ಮರಾಠರು ಧಾಳಿಯಿಟ್ಟು ಬಂದು ಪ್ರಬಲರಾಗಿದ್ದರೂ ಧಾರವಾಡವು ಮರಾಠಾ ಸೀಮೆಯಲ್ಲ. ಈಗಾಗಲೇ ಮದರಾಸಿನ ವಶದಲ್ಲಿರುವ ಕನ್ನಡದ ಪ್ರದೇಶಗಳೊಂದಿಗೆ ಪ್ರತಿನಿತ್ಯದ ಸಂಬಂಧವುಳ್ಳದ್ದು. ಈ ಧಾರವಾಡಸೀಮೆ ಮತ್ತು ಮದರಾಸಿನ ವಶದಲ್ಲಿರುವ ಕನ್ನಡದ ಪ್ರದೇಶಗಳಿಗೂ ಬಳ್ಳಾರಿ, ಸೊಂಡ ಮತ್ತು ಮೈಸೂರು ಸೀಮೆಗಳು ಯಾವ ದೃಷ್ಟಿಯಿಂದಲೂ ವ್ಯತ್ಯಾಸವಿಲ್ಲ. ಆಡುವ ಭಾಷೆ ಕನ್ನಡ, ಸ್ವಾಭಾವಿಕವಾಗಿ ಒಂದೇ ಆಗಿರುವ ಸೀಮೆಗೆ ಸೇರಿಸುವುದರಿಂದ ಜನ ಸಂತೋಷಪಡುತ್ತಾರೆ. ಹೀಗೆ ಮಾಡದೇ ಮರಾಠರ ಪ್ರಭಾವ ಬೆಳೆಯುವುದಕ್ಕೆ ಆಸ್ಪದ ಕೊಡುವ ಮತ್ತು ಸ್ವಾಭಾವಿಕವಾದ ನಂಟು, ಇಲ್ಲದ ಮುಂಬಯಿ ಪ್ರಾಂತಕ್ಕೆ ಧಾರವಾಡ ಸೇರಿಸುವುದು ಯುಕ್ತವಲ್ಲ. ಈ ಒಂದು ಶಾಶ್ವತವಾದ ಏಕೀಕರಣವನ್ನು ಸಾಧಿಸುವುದರಲ್ಲಿ ಒಬ್ಬ ಕನ್ನಡ ಜನರ ಹಿತದೃಷ್ಟಿ ಎದ್ದು ಕಾಣುತ್ತದೆ. ತಮ್ಮ ಯೋಗಕ್ಷೇಮಕ್ಕೋಸ್ಕರ ಪುಣೆ, ಮುಂಬಯಿ ನಗರಗಳ ಕಡೆ ನೋಡುವ ಮರಾಠಾ ಸರದಾರರ ಹಿತರಕ್ಷಣೆಗಿಂತ ಈ ಒಟ್ಟು ಜನಹಿತದ ದೃಷ್ಟಿ ಮೇಲ್ಮಟ್ಟದ್ದು".[೧]

---

೧. ಡಾ. ಹೆಚ್.ಎಸ್.ಗೋಪಾಲರಾವ್, ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೬೨.

"ಮನ್ರೋನ ಅಭಿಪ್ರಾಯಗಳಿಗೆ ಮನ್ನಣೆ ದೊರೆತಿದ್ದರೆ ಕರ್ನಾಟಕ ಏಕೀಕರಣ ಚಳುವಳಿಯ ಅವಶ್ಯಕತೆಯೇ ಇರುತ್ತಿರಲಿಲ್ಲವೇನೋ! ಆದರೆ ಕಂಪನಿ ಸರಕಾರ ಇದಕ್ಕೆ ವಿರುದ್ಧವಾಗಿ ನಡೆದುಕೊಂಡು ಉತ್ತರ ಜಿಲ್ಲೆಗಳನ್ನು ಮುಂಬಯಿ ಅಧಿಪತ್ಯಕ್ಕೆ ಸೇರಿಸಿ, ೧೮೩೫ರಲ್ಲಿ ಆ ಭಾಗದ ಆಡಳಿತ ಭಾಷೆಯು ಮರಾಠಿಯ ಬದಲು ಕನ್ನಡವೇ ಆಗಿರಬೇಕೆಂದು ನಿರ್ಣಯಿಸಿತು. ಆದರೆ ಅಧಿಕಾರಿಗಳ ಒತ್ತಾಸೆಯಿಲ್ಲದೆ ಕನ್ನಡ ಹಿಂದೆಯೇ ಉಳಿಯಿತು. ಹೀಗೆ ವಿವಿಧ ಆಡಳಿತ ವಿಭಾಗಗಳಿಗೆ ಸೇರಿ ಒಡೆದ ಕರ್ನಾಟಕವು ಒಂದಾಗಲು ೧೨೧ ವರ್ಷಗಳು ಬೇಕಾದವು."[೧]

ಕರ್ನಾಟಕ ಏಕೀಕರಣಕ್ಕೆ ಮುಖ್ಯ ಪ್ರೇರಣೆಗಳನ್ನು ಗಮನಿಸಿದಾಗ ಕನ್ನಡ ಶಿಕ್ಷಣದ ಬಗೆಗಿನ ಜಾಗೃತಿ ಒಂದೆಡೆಯಾದರೆ ಕನ್ನಡ ಸಾಹಿತ್ಯ, ಸಂಸ್ಕೃತಿ, ಭಾಷೆ ಮತ್ತಿತರ ಕನ್ನಡಿಗರ ಸಮಸ್ಯೆಗಳನ್ನು ಅರ್ಥೈಸಿ ನಿವಾರಿಸಿ, ಕನ್ನಡ ಭಾಷಿಕರನ್ನು ಒಂದಾಗಿಸುವ ಪ್ರಯತ್ನಗಳ ಅವಶ್ಯಕತೆಗಳನ್ನು ಅರಿತ ಧಾರವಾಡ ಪ್ರದೇಶದ ಜನ, ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದ ಫಲವೇ ಕರ್ನಾಟಕ ವಿದ್ಯಾವರ್ಧಕ ಸಂಘ.

ಕರ್ನಾಟಕ ವಿದ್ಯಾವರ್ಧಕ ಸಂಘವು ಪ್ರಬಲವಾಗಿ ಬೆಳೆಯುತ್ತಾ, ತನ್ನ ಉದ್ದೇಶಿತ ಕನ್ನಡ ನುಡಿಯ ಸೇವೆ ಮಾಡುತ್ತಲೇ ಕರ್ನಾಟಕ ಏಕೀಕರಣದ ಬಗೆಗೂ ಗಮನಹರಿಸಿತು.

ಬ್ರಿಟಿಷ್ ಅಧಿಕಾರಕ್ಕೆ ಒಳಗಾದ ಎಲ್ಲ ಕನ್ನಡ ಊರು, ತಾಲ್ಲೂಕು, ಜಿಲ್ಲೆಗಳನ್ನು ಒಟ್ಟುಗೂಡಿಸಿ ಒಂದು ರಾಜಕೀಯ ವಿಭಾಗವನ್ನು ಮಾಡಿ ಅದಕ್ಕೆ ಕರ್ನಾಟಕ ಪ್ರಾಂತವೆಂದು ಕರೆಯುವ ಬಗ್ಗೆ ಸರಕಾರಕ್ಕೆ ಬಿನ್ನಹ ಮಾಡಬೇಕು. ಕರ್ನಾಟಕ ಪ್ರಾಂತೀಕರಣದ ಬಗ್ಗೆ ಒಂದು ಸಂಸ್ಥೆ ಪ್ರಕಟಿಸಿದ ಅಭಿಪ್ರಾಯ ಇದೇ ಮೊದಲನೆಯದು.

ಕನ್ನಡದ ಹಿತರಕ್ಷಣೆಗೆ ಟೊಂಕಕಟ್ಟಿ ನಿಂತಿದ್ದ ಕರ್ನಾಟಕ ವಿದ್ಯಾವರ್ಧಕ ಸಂಘವು ಧಾರವಾಡ ಪ್ರಾಂತ್ಯದಲ್ಲಿ ಕನ್ನಡ ಪರವಾಗಿ ಆದ ಅನೇಕ ಪ್ರಮುಖ ಕಾರ್ಯಗಳಲ್ಲಿ ಪ್ರಧಾನಪಾತ್ರವಹಿಸಿತ್ತೆಂಬುದು ಮರೆಯದ ಮಾತಾಗಿದೆ. ಹಾಗೆಯೇ ಕನ್ನಡ ಸಾಹಿತ್ಯ ಪರಿಷತ್ತು ಏಕೀಕರಣಕ್ಕೆ ಕೆಲಸವನ್ನು ಮಾಡಿದೆ.

ಎಂ.ವಿಶ್ವೇಶ್ವರಯ್ಯ, ಎಚ್.ವಿ.ನಂಜುಂಡಯ್ಯ ಅವರಂತಹ ಅಧಿಕಾರಿಗಳ ಸಹಕಾರ, ಪ್ರೋತ್ಸಾಹಗಳ ಫಲವಾಗಿ ಕರ್ನಾಟಕದ ಬಹುತೇಕ ಎಲ್ಲಾ

---

೧. ಡಾ. ಹೆಚ್.ಎಸ್.ಗೋಪಾಲರಾವ್, ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೬೩.

ಕನ್ನಡಾಭಿಮಾನಿಗಳ ಸಂಕಲ್ಪದಿಂದ ೧೯೧೫ರಲ್ಲಿ ಕರ್ನಾಟಕ ಭಾಷಾ ಪರಿಷ್ಕರಣ, ಭಾಷೋನ್ನತಿ ಗ್ರಂಥಾಭಿವೃದ್ಧಿಗಳೇ ಮುಖ್ಯ ಉದ್ದೇಶವಾಗಿದ್ದು ಇಡೀ ಕರ್ನಾಟಕವನ್ನು ಪ್ರತಿನಿಧಿಸುವ ಕರ್ನಾಟಕ ಸಾಹಿತ್ಯ ಪರಿಷತ್ತು ಸ್ಥಾಪನೆಗೊಂಡಿತು. ಅದರ ಕಾರ್ಯನಿರ್ವಾಹಕ ಮಂಡಳಿಯಲ್ಲಿ ಮೈಸೂರು ಸಂಸ್ಥಾನದ ಪ್ರತಿನಿಧಿತ್ವವಲ್ಲದೆ, ಮುಂಬಯಿ ಅಧಿಪತ್ಯ, ಮದರಾಸು ಅಧಿಪತ್ಯ ಹೈದರಾಬಾದು ಸಂಸ್ಥಾನ, ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು ಮತ್ತು ಕೊಡಗು ರಾಜ್ಯಗಳಿಗೂ ಪ್ರಾತಿನಿಧ್ಯವಿದ್ದುದು ಗಮನಾರ್ಹವಾಗಿದೆ. ತನ್ನ ಆರಂಭ ಕಾಲದ ಉದ್ದೇಶಗಳ ಜೊತೆಗೆ ಕರ್ನಾಟಕ ಏಕೀಕರಣ ವಿಷಯದಲ್ಲಿಯು ಕನ್ನಡ ಸಾಹಿತ್ಯ ಪರಿಷತ್ತು ಆಸಕ್ತಿ ವಹಿಸಿತು. 'ಕನ್ನಡ ನುಡಿ' ಮತ್ತು ಸಾಹಿತ್ಯ ಪರಿಷತ್ಪತ್ರಿಕೆಗಳ ಮೂಲಕ ಕರ್ನಾಟಕದ ಅನೇಕ ಸಾಹಿತಿಗಳು ಕನ್ನಡದ ಹಲವಾರು ಸಮಸ್ಯೆಗಳನ್ನು ಪ್ರಕಟಿಸುತ್ತಾ ಏಕೀಕರಣಕ್ಕೆ ಶ್ರಮಿಸಿದರು.

"ಭಾರತೀಯ ರಾಷ್ಟ್ರೀಯ ಹೋರಾಟದಲ್ಲಿ ೧೯೦೫-೦೬ರಿಂದಲೇ ಪಾಲ್ಗೊಂಡ ಆಲೂರು ವೆಂಕಟರಾಯರು ಕರ್ನಾಟಕ ಏಕೀಕರಣದ ಕನಸು ಕಂಡು, ತಮ್ಮ ಜೀವಿತಾವಧಿಯಲ್ಲೇ ಅದು ಅಪೂರ್ಣವಾಗಿಯಾದರೂ ಸಾಧಿತವಾದುದ್ದನ್ನು ಕಂಡರು. ೧೯೦೫ನೆಯ ಇಸವಿ ಮೇ ೫ರಂದು ಮೊದಲಬಾರಿಗೆ ಆನೆಗೊಂದಿಯನ್ನು ದರ್ಶಿಸಿ ಕರ್ನಾಟಕದ ಗತ ಇತಿಹಾಸದ ಬಗೆಗೆ ಅಪಾರ ಪ್ರೀತಿ ತಳೆದ ಆಲೂರರು ಅನಂತರ ಕರ್ನಾಟಕದ ತುಂಡು ತುಂಡಾದ ಭಾಗಗಳೆಲ್ಲ ಒಂದುಗೂಡುವಲ್ಲಿ ಶ್ರಮಿಸಿದರು. ಅವರ ಕೃತಿ, 'ಕರ್ನಾಟಕ ಗತ ವೈಭವ' ಸಕಾಲಕ್ಕೆ ಪ್ರಕಟವಾಗಿ ಕನ್ನಡಿಗರನ್ನು ಎಚ್ಚರಿಸಿತು."[೧]

ವೆಂಕಟರಂಗೋಕಟ್ಟಿ, ಮುದವೀಡು ಕೃಷ್ಣರಾಯರು ಬಿಂದೂರಾವ್ ಮುತಾಲಿಕ ದೇಸಾಯಿ, ಕಡಪಾ ರಾಘವೇಂದ್ರರಾವ್ ಗದಿಗೆಯ್ಯ ಹೊನ್ನಾಪುರಮಠ, ಪಾಟೀಲ ಸಂಗಪ್ಪ ಮುಂತಾದವರು ಆಲೂರರ ಜೊತೆಗಿದ್ದರು. ಕರ್ನಾಟಕತ್ವವೆಂಬುದು ನನ್ನ ವಿಶಿಷ್ಟ ವಿಚಾರ. ಆ ಶಬ್ದವೂ ಕೂಡ ನನ್ನ ಟಂಕಶಾಲೆಯಲ್ಲಿ ಹುಟ್ಟಿದ್ದು, ಅದೊಂದು ಶಬ್ಧದಲ್ಲಿ ರಾಜಕಾರಣ, ಧರ್ಮ, ವಾಙ್ಮಯ, ಇತಿಹಾಸ, ಕಲೆ ಮುಂತಾದ ಎಲ್ಲಾ ವಿಷಯಗಳು ಸೇರ್ಪಡೆಯಾಗುತ್ತದೆ ಎಂದು ಕರ್ನಾಟಕದ ಬಗ್ಗೆ ಅಭಿಮಾನ ಬೆಳಸಿದ ಆಲೂರರು ಕಾಂಗ್ರೆಸ್‌ನ ಮೂಲಕ ಕರ್ನಾಟಕದ ರಾಜಕೀಯ ಏಕೀಕರಣ, ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ಸಾಂಸ್ಕೃತಿಕ ಏಕೀಕರಣ ಆಗಬೇಕೆಂದು ಹಂಬಲಿಸಿದರು.

---

೧. ಡಾ. ಹೆಚ್.ಎಸ್.ಗೋಪಾಲರಾವ್, ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೭೦.

ನಂತರ ಬೆಳಗಾವಿ ಜಿಲ್ಲೆಯನ್ನು ಮಹಾರಾಷ್ಟ್ರಕ್ಕೆ ಸೇರಿಸಿದ ವಿಷಯ ವಿರೋಧಿಸಿ ಆಲೂರರು, ಕಡಪ ರಾಘವೇಂದ್ರರಾಯರು, ನರಗುಂದಕರು ಒಟ್ಟಾಗಿ ಕರ್ನಾಟಕ ಸಭೆ ಸ್ಥಾಪಿಸಿ ಕರ್ನಾಟಕ ಏಕೀಕರಣವನ್ನು ಪ್ರಧಾನ ವಿಷಯವನ್ನಾಗಿ ಸ್ವೀಕರಿಸಿ ಅದಕ್ಕಾಗಿ ಶ್ರಮಿಸಲಾಯಿತು.

"ಕರ್ನಾಟಕ ಏಕೀಕರಣದ ವಿಷಯವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಡಾ. ಯು.ರಾಮರಾಯರು ಮತ್ತು ಮುದವೀಡು ಕೃಷ್ಣರಾಯರೂ ಬಳ್ಳಾರಿ ಜಿಲ್ಲೆಯಲ್ಲಿ ಕಡಪಾ ರಾಘವೇಂದ್ರರಾಯರೂ ಜನರಿಗೆ ತಿಳುವಳಿಕೆ ನೀಡಿ ಪ್ರಚಾರ ಮಾಡಿದರು. ಕಡಪಾ ರಾಘವೇಂದ್ರರಾಯರು ಕರ್ನಾಟಕ ಸಭಾದ ಮೂಲಕ ಪ್ರಕಟಿಸಿದ 'ಕನ್ನಡಿಗರ ಕರ್ತವ್ಯ' ಎಂಬ ಕಿರುಹೊತ್ತಗೆಯು ಆ ನಿಟ್ಟಿನಲ್ಲಿ ಕನ್ನಡಿಗರ ಮನವೊಲಿಸಿ ಒಂದಾಗಬೇಕೆಂಬ ಪ್ರೇರಣೆ ನೀಡಲು ಸಹಕಾರಿಯಾಯಿತು. ಮೌಂಟ್‌ಪೋರ್ಡ್ ವರದಿಯ ಪ್ರಭಾವದಿಂದ ಭಾಷಾವಾರು ಪ್ರಾಂತ್ಯಗಳ ರಚನೆಯಾಗುವುದು ಖಚಿತ ಎಂಬ ಅಭಿಪ್ರಾಯ ಹೊಂದಿದ್ದ ಹಲವು ಜನ ಸೇರಿ ೧೯೧೮ರಲ್ಲೇ ಅಖಿಲ ಕರ್ನಾಟಕ ರಾಜಕೀಯ ಪರಿಷತ್ತನ್ನು ಸ್ಥಾಪಿಸಿದರು."[೧]

ಭಾಷಾವಾರು ಪ್ರಾಂತ ರಚನೆಗೆ ಒಲವಿದ್ದ ಗಾಂಧೀಜಿಯವರ ಒತ್ತಾಸೆಯು ದೊರೆತು ನಾಗಪುರದಲ್ಲಿ ೧೯೨೦ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನ ಭಾಷಾವಾರು ಪ್ರಾಂತ ರಚನೆಗೆ ಒಪ್ಪಿತು. ಹೀಗೆ ರಾಜಕೀಯವಾಗಿ ಕರ್ನಾಟಕವು ರೂಪುಗೊಂಡಿತು. ಕರ್ನಾಟಕ ಏಕೀಕರಣಕ್ಕೆ ಇದು ನಾಂದಿಯಾಯಿತು.

"ಹೊಸದಾಗಿ ಸ್ಥಾಪಿತವಾದ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯ ಕೇಂದ್ರ ಕಾರ್ಯಸ್ಥಾನವು ಗದಗ ಎಂದು ಒಪ್ಪಿತವಾಗಿ, ಸಮಿತಿಯ ವ್ಯಾಪ್ತಿಗೆ ಕನ್ನಡ ಮಾತನಾಡುವ ಪ್ರದೇಶಗಳೆಲ್ಲ ಸೇರಬೇಕೆಂದು ನಿರ್ಣಯವಾಯಿತು. ಆಗ ಕೆ.ಪಿ.ಸಿ.ಸಿ.ಯ ವ್ಯಾಪ್ತಿಗೆ ಮುಂಬಯಿ ಕರ್ನಾಟಕ ಪ್ರಾಂತ್ಯಗಳಲ್ಲದೆ ಮದ್ರಾಸ್ ಮತ್ತು ಹೈದರಾಬಾದ್‌ನ ಕನ್ನಡ ಪ್ರಾಂತ್ಯಗಳು ಮತ್ತು ಮೈಸೂರು ಸಂಸ್ಥಾನಗಳೂ ಸೇರಿದವು. ಇದರಿಂದ ಕನ್ನಡ ಮಾತನಾಡುವ ಪ್ರದೇಶಗಳಲೆಲ್ಲ ಕರ್ನಾಟಕ ಪ್ರಾಂತ್ಯಕ್ಕೆ ದೊರೆತ ರಾಜಕೀಯ ಪ್ರತಿನಿಧಿತ್ವದಿಂದ ಹೊಸ ಉತ್ಸಾಹ ಮೂಡಿತು."[೨]

---

೧. ಡಾ. ಹೆಚ್.ಎಸ್.ಗೋಪಾಲರಾವ್, ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೭೨.

೨. ಅದೇ, ಪುಟ. ೭೪.

ಕನ್ನಡ ಭಾಷಿಕ ಪ್ರಾಂತ್ಯಗಳ ನಡುವೆಯೇ ಬ್ರಿಟಿಷ್ ಆಳ್ವಿಕೆಯ ಪ್ರಾಂತ್ಯಗಳೊಡನೆ ಆಡಳಿತಾತ್ಮಕ ಸಂಪರ್ಕವಿದ್ದ ಅಥವಾ ಸಂಪರ್ಕವಿರದಿದ್ದ ಹಲವು ಸಂಸ್ಥಾನಗಳಿದ್ದುವು. ಸಾಂಗಲಿ, ಜಮಖಂಡಿ ಜತ್ತ, ಸೊಂಡೂರು, ಮುಧೋಳ, ನರಗುಂದ ಇತ್ಯಾದಿ ಸಂಸ್ಥಾನಗಳಲ್ಲಿ ಕನ್ನಡಿಗರೇ ಅಧಿಕವಾಗಿ ವಾಸಿಸುತ್ತಿದ್ದರೂ, ಆಳುತ್ತಿದ್ದವರು ಮರಾಠಿ ಭಾಷಿಕರಾಗಿದ್ದುದರಿಂದ ಆಡಳಿತವೆಲ್ಲಾ ಮರಾಠಿ ಅಥವಾ ಇಂಗ್ಲಿಷ್‌ನಲ್ಲಿ ಮತ್ತು ವ್ಯವಹಾರವೆಲ್ಲ ಮೋಡಿ ಲಿಪಿಯಲ್ಲೇ ನಡೆಯುತ್ತಿದ್ದವು. ಇಂತಹ ವಿಪರ್ಯಾಸದ ಬಗೆಗೆ ಕೌಜಲಗಿ ಹನುಮಂತರಾಯರು ಬರೆದಿರುವ ಮಾತುಗಳು ಮಹತ್ವವೆನಿಸುತ್ತವೆ ಮಾತ್ರವಲ್ಲ. ಅಂದಿನ ಕನ್ನಡಿಗರ ಪರಿಸ್ಥಿತಿಯ ಸ್ಪಷ್ಟ ಚಿತ್ರವನ್ನು ಎದುರಿಗಿಡುತ್ತದೆ. ಇಂತಹ ಸಂದರ್ಭದಲ್ಲಿ ನವೋದಯ ಸಾಹಿತಿಗಳು ತಮ್ಮ ಸಾಹಿತ್ಯದ ಮೂಲಕ ಪ್ರೇರಣೆಯನ್ನು ನೀಡುತ್ತಾ ಇಂತಹ ವಿಪರ್ಯಾಸಗಳ ಸಂದರ್ಭದಲ್ಲಿ ಮುಂಬಯಿ ಮತ್ತು ಮದ್ರಾಸ್ ಪ್ರಾಂತ್ಯಗಳ ಕರ್ನಾಟಕದ ಜನ ಏಕೀಕರಣಕ್ಕೆ ಹಂಬಲಿಸಿದರು. ಕರ್ನಾಟಕವು ಆರ್ಥಿಕವಾಗಿ ಸ್ವಾವಲಂಬಿಯಾಗುವ ಸಾಮರ್ಥ್ಯವಿಲ್ಲ ಎಂಬ ಆಕ್ಷೇಪಣೆಗೂ ಉತ್ತರ ನೀಡಲಾಯಿತು. ಎಲ್ಲಾ ರೀತಿಯಿಂದಲೂ ಕರ್ನಾಟಕ ಪ್ರಾಂತ್ಯಗಳು ಏಕೀಕರಣಕ್ಕೆ ಸಿದ್ಧವಾಗಿವೆ ಎಂಬುದು ಖಚಿತವಾದರೂ ಬ್ರಿಟಿಷ್ ಸರ್ಕಾರ ಏಕೀಕರಣಕ್ಕಾಗಲೀ ಭಾಷಾವಾರು ಪ್ರಾಂತ್ಯ ರಚನೆಗೆ ಮುಂದೆ ಬರಲಿಲ್ಲ.

"ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದಂತೆ ಬ್ರಿಟಿಷ್ ಸರ್ಕಾರದ ಆಕ್ಷೇಪಣೆಗಳು ಕೆಳಗಿನಂತಿದ್ದವು.

೧. ಕರ್ನಾಟಕಕ್ಕೆ ತನ್ನದೇ ಆದ ವಿಶಿಷ್ಟ ಸಂಸ್ಕೃತಿ ಇಲ್ಲ, ಜನಾಂಗೀಕ ಏರಿತೆಯಾಗಲಿ। ಸಾಂಸ್ಕೃತಿಕ ಸಂಪರ್ಕವಾಗಲೀ ಇಲ್ಲಿನ ಜನರಲ್ಲಿಲ್ಲ.

೨. ಅದಕ್ಕೆ ತನ್ನದೇ ಆದ ಒಂದು ಇತಿಹಾಸವಿರದೆ, ಎಂದೂ ಅದು ಒಂದು ಪ್ರಾಂತ್ಯವಾಗಿರಲಿಲ್ಲ.

೩. ಕರ್ನಾಟಕದ ಭಾಷೆ ಕನ್ನಡ ಒಂದೇ ಅಲ್ಲ.

೪. ಕರ್ನಾಟಕದ ವಿಸ್ತಾರ ಮತ್ತು ಜನಸಂಖ್ಯೆಯ ಪ್ರಮಾಣ ಕಡಿಮೆ.

೫. ಕರ್ನಾಟಕದ ಪ್ರಾಂತ್ಯಗಳಲ್ಲಿ ನಿರಂತರತೆ/ಸಂಪರ್ಕ ಇಲ್ಲ.

೬. ಕರ್ನಾಟಕದಲ್ಲಿ ಸಂಸ್ಥಾನಗಳ ಸಮಸ್ಯೆಗಳಿವೆ.

೭. ಸಾರಿಗೆ ಸಂಪರ್ಕ, ರಾಜಧಾನಿಯಾಗಬಲ್ಲ ಪಟ್ಟಣಗಳು, ಪ್ರಭಾವ ಬೀರಬಲ್ಲ ನಾಯಕರು, ಬಂದರುಗಳು – ಇತ್ಯಾದಿ ಕೊರತೆಗಳು ಕರ್ನಾಟಕದಲ್ಲಿವೆ.

೮. ಕರ್ನಾಟಕವು ಸ್ವಾವಲಂಬಿಯಾಗುವ ಸಾಧ್ಯತೆಗಳು ಕಡಿಮೆ."[೧]

ಬ್ರಿಟಿಷ್ ಸರ್ಕಾರದ ಆಕ್ಷೇಪಣೆಗಳಲ್ಲಿ ಹುರುಳಿಲ್ಲ ಎನ್ನುವುದು ಎಲ್ಲರಿಗೂ ತಿಳಿದಿದ್ದ ವಿಷಯವಾಗಿತ್ತು. ಕರ್ನಾಟಕದ ಏಕೀಕರಣ ಸಂಘವು ಸರ್ಕಾರದ ಆಕ್ಷೇಪಣೆಗಳಿಗೆ ಕೆಳಕಂಡಂತೆ ಜವಾಬು ನೀಡಿತು.

೧. ಕರ್ನಾಟಕ ಮತ್ತು ಕನ್ನಡಿಗರ ಇತಿಹಾಸ ಮತ್ತು ಸಂಸ್ಕೃತಿಗಳ ಬಗೆಗಿನ ಅಜ್ಞಾನ.

೨. ಕರ್ನಾಟಕದಲ್ಲಿ ಇತರ ಭಾಷಿಕ ಜನರಿದ್ದರೂ, ಶೇ. ೬೫ರಷ್ಟು ಜನರ ಭಾಷೆ ಕನ್ನಡವೇ ಆಗಿದೆ.

೩. ತೊಂದರೆಯಿಲ್ಲ ಎಂಬುದಕ್ಕೆ ಆಧಾರಗಳೇನು?

೪. ಅರಿವಿನ ಕೊರತೆಯೇ ಕಾರಣ.

೫. ಅದು ಸಮಸ್ಯೆಯಲ್ಲ. ಬ್ರಿಟಿಷ್ ಕರ್ನಾಟಕ ಪ್ರಾಂತ್ಯಗಳ ಏಕೀಕರಣವೇ ನಮ್ಮ ಪ್ರಮುಖ ಬೇಡಿಕೆ.[೨]

ಇಷ್ಟೆಲ್ಲಾ ಸಮಸ್ಯೆಗಳ ನಡುವೆ ಬಿ.ಎಂ.ಶ್ರೀ., ಬೇಂದ್ರೆ, ಗೋವಿಂದ ಪೈ, ಕುವೆಂಪು ಮೊದಲಾದ ಕನ್ನಡದ ಹಿರಿಯ ಕವಿಗಳು, 'ಸ್ವತಂತ್ರ ಕರ್ನಾಟಕ', 'ಸಂಯುಕ್ತ ಕರ್ನಾಟಕ' ಮೊದಲಾದ ಪತ್ರಿಕೆಗಳಲ್ಲಿ ಏಕೀಕರಣದ ಮಹತ್ವ ಕುರಿತು ಪ್ರೇರಕ, ಪ್ರಚೋದಕ ಕವನ, ಲೇಖನಗಳನ್ನು ಬರೆಯತೊಡಗಿದರು.

ಬೇಂದ್ರೆಯವರ "ಕವನವಾದ"
ಏಳು ಶೂರರ ಖಣೀ ಏಳು ಶೂರರ ರಾಣಿ
ಏಳು ತೀರದ ವೀರರಸದ ವಾಣಿ
ಎಂದು ಕನ್ನಡಿಗರಿಗೆ ಕರೆನೀಡಿದರು
ಎಲ್ಲಾದರೂ ಇರು, ಎಂತಾದರೂ ಇರು
ಎಂದೆಂದಿಗೂ ನೀ ಕನ್ನಡವಾಗಿರು

ಎಂಬುದಾಗಿ ಕುವೆಂಪುರವರು ಪ್ರಚೋದಿಸುತ್ತ

---

೧. ಡಾ. ಹೆಚ್.ಎಸ್.ಗೋಪಾಲರಾವ್, ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೯೫.

೨. ಅದೇ., ಪುಟ. ೫೮.

ಬೆಂಕಿ ಬಿದ್ದಿದೆ ಮನೆಗೆ ಓ ಬನ್ನಿ
ಎಲ್ಲರೂ ಎದ್ದೆದ್ದೂ ಓಡಿ ಬನ್ನಿ

ಎಂಬುದಾಗಿ ಕಯ್ಯಾರ ಕಿಞ್ಞಣ್ಣರೈ ರವರು ಜನರನ್ನು ಜಾಗೃತಗೊಳಿಸಿದರು.

ಕನ್ನಡವನುಳಿದೆನಗೆ । ಅನ್ಯ ಜೀವನವಿಲ್ಲ
ಕನ್ನಡವೇ ಎನ್ನುಸಿರು। ಪೆತ್ತೆನ್ನ ತಾಯಿ

ಎಂಬುದಾಗಿ ಬೆನಗಲ್ ರಾಮರಾಯರು ಜನರನ್ನು ಹುರಿದುಂಬಿಸಿ

ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು
ಬದುಕು ಬಲುಹೀನ ನಿಧಿಯು, ಸದಭಿಮಾನದ ಗೂಡು

ಎಂಬುದಾಗಿ ಹುಯಿಲಗೋಳ ನಾರಾಯಣರವರು ತಿಳಿಸಿದರು.

ಹೀಗೆ ಸಾಹಿತ್ಯ ಬರವಣಿಗೆಯ ಮುಖಾಂತರ ಕನ್ನಡಿಗರಲ್ಲಿ ಏಕೀಕರಣಕ್ಕೆ ಪ್ರೇರಣೆ ನೀಡಿದರು.

"೧೯೪೯ ಡಿಸೆಂಬರ್ ೮ರಂದು ದಾವಣಗೆರೆಯಲ್ಲಿ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿ ಮತ್ತು ಕರ್ನಾಟಕ ಏಕೀಕರಣ ಸಭೆ ಇವುಗಳ ಸಂಯುಕ್ತಾಶ್ರಯದಲ್ಲಿ ನಡೆದ ಅಖಿಲ ಕರ್ನಾಟಕ ಮಹಾಸಮ್ಮೇಳನವು ಕನ್ನಡ ಭಾಷೆ, ಕನ್ನಡ ಸಂಸ್ಕೃತಿ, ಕನ್ನಡ ನಾಡಿನ ಭೌಗೋಳಿಕ ವಲಯ ಇವುಗಳನ್ನಾಧರಿಸಿ ಪ್ರಾಂತ್ಯ ರಚನೆಯಾಗಬೇಕೆಂಬ ನಿರ್ಣಯವನ್ನು ಸರ್ವಾನುಮತದಿಂದ ಸ್ವೀಕರಿಸಿತು. ನಂತರ ಭಾರತ ಸರ್ಕಾರವು ಫಸಲ್ ಆಲಿ ಸಮಿತಿಯ ಶಿಫಾರಸ್ಸುಗಳ ಪ್ರಕಾರ, ರಾಷ್ಟ್ರಪತಿಗಳ ಸಹಿ ಪಡೆದು ೧೯೫೬ ನವೆಂಬರ್ ೧ರಂದು ಹೊಸ ರಾಜ್ಯ ಉದಯವಾಯಿತು."[೧]

ಅಂದಿನಿಂದ ಇಂದಿನವರೆಗೂ, ಇನ್ನು ಮುಂದೆಯೂ ನವೆಂಬರ್ ತಿಂಗಳು 'ಕನ್ನಡ ರಾಜ್ಯೋತ್ಸವ' ಮಾಸವೆಂಬ ಖ್ಯಾತಿ ಪಡೆದು, ಕನ್ನಡ ನಾಡಿನ ಕನ್ನಡಿಗರು ಅದ್ದೂರಿಯಿಂದ ಮೆರೆಯುತ್ತಾರೆ. ಆದರೆ ಅಷ್ಟೇ ಪ್ರಮಾಣದಲ್ಲಿ ಕಾಸರಗೊಂಡು, ನೀಲಗಿರಿ, ಹೊಸೂರು, ತಾಳವಾಡಿ, ಮಡಕಶಿರ, ಆಲೂರು, ಆದವಾಗಿ, ರಾಮದುರ್ಗ, ದೇಗಲೂರು, ಸೊಲ್ಲಾಪುರ, ಜತ್, ಅಕ್ಕಲರೋಟೆ, ಗಡ ಹಿಂಗ್ಲಜ ಭಾಗಗಳು ಮಲತಾಯಿ ಮಕ್ಕಳಾಗಿ ಪ್ರತಿದಿನವೂ ಕಣ್ಣೀರು ಕರೆಯುತ್ತಾರೆ.

---

೧. ಡಾ. ಹೆಚ್.ಎಸ್.ಗೋಪಾಲರಾವ್, ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೯೭.

ಇದರ ಹಿಂದೆ ಕನ್ನಡಿಗರಲ್ಲಿ ಅತೃಪ್ತಿ ಇದೆ; ಸಂಕಟ ಇದೆ. "ಕನ್ನಡಿಗರು ಪಡೆದುಕೊಂಡದ್ದಕ್ಕಿಂತ ಕಳೆದುಕೊಂಡದ್ದೇ ಹೆಚ್ಚು. ಕೆಟ್ಟ ರಾಜಕೀಯದಿಂದಾಗಿ ರಕ್ತವನ್ನು ಹಂಚಿಕೊಂಡು ಹುಟ್ಟಿದ ಸೋದರರು ಪರಕೀಯರಾಗಿ ಅನಾಥರಾಗಿ ಬದುಕು ಮಾಡಬೇಕಾಗಿದೆ. ಫಣಿಕ್ಕರ ಪ್ರಭಾವದಿಂದ ಕಾಸರಗೋಡು ಕರ್ನಾಟಕಕ್ಕೆ ಸೇರಲಿಲ್ಲ. ರಾಷ್ಟ್ರಕವಿ ಗೋವಿಂದ ಪೈರವರ ತಪೋಭೂಮಿ ಮಂಜೇಶ್ವರವೂ ಮಳೆಯಾಳಿಗಳ ವಶವಾಯಿತು. 'ಶೂನ್ಯಸಂಪಾದನ'ಕಾರ ಸಿದ್ಧಲಿಂಗ ಶಿವಯೋಗಿಯ ಗುಮ್ಮಳಾ-ಪುರವನ್ನು ತಮಿಳುನಾಡು ಗುಳುಂ ಮಾಡಿತು. ಬೆಂಗಳೂರು ಬದಿಯ ಹೊಸೂರು ಕನ್ನಡ ನಾಡಿನ ಗಡಿಯಾಚೆಯ 'ತಮಿಳಿಫಂ' ಆಯಿತು. ಅತ್ತ ಕರ್ನಾಟಕಕ್ಕೆ ಸೇರಿದ ಪಾವಗಡ, ಇತ್ತ ಕರ್ನಾಟಕದ ತುಮಕೂರು ನಡುವಣ ಕೊಂಡಿಯಂತಿರುವ ಮಡಕಶಿರ, ಇಂದಿಗೂ ಕನ್ನಡಿಗರೇ ತುಂಬಿ ತುಳುಕುತ್ತಿರುವ ಆಲೂರು, ಆದವಾನಿ, ರಾಮದುರ್ಗ, ಹಿಂದೂಪುರ, ತೆನುಗೊಂಡ, ಅನಂತಪುರಗಳನ್ನು ಆಂಧ್ರ ಕಬಳಿಸಿತು. ೧೨ನೆಯ ಶತಮಾನದ ಶ್ರೇಷ್ಠ ವಚನಕಾರನ ಯೋಗಭೂಮಿ ಸೊನ್ನಲಿಗೆ, ಜತ್, ಅಕ್ಕಲಕೋಟೆ, ದೇಗಲೂರು ಮೊದಲಾದವುಗಳನ್ನು ಮಹಾರಾಷ್ಟ್ರ ಸ್ವಾಹಾ ಮಾಡಿತು. ಒಟ್ಟಿನಲ್ಲಿ ಕನ್ನಡಿಗರ ಬಹುದಿನಗಳ ಕನಸಿನ ಕರ್ನಾಟಕ ಖಂಡತುಂಡಾಗಿ ಹೆಸರಿಗೆ ಮಾತ್ರ ಅಖಂಡ ಕರ್ನಾಟಕವೆಂದು ಕರೆಸಿಕೊಂಡಿತು."[೧]

ಎಲ್ಲ ಮಹನೀಯರ ಎಲ್ಲ ಪ್ರಯತ್ನಗಳೂ ವ್ಯರ್ಥವಾದವು. ಕಾಸರಗೋಡಿನ ಕನ್ನಡಿಗರ ಕಣ್ಣೀರು ಬತ್ತಲಿಲ್ಲ. ಮಹಾರಾಷ್ಟ್ರದ ಕನ್ನಡಿಗರ ಸಂಕಟ ಮುಕ್ತಾಯ ಕಾಣಲಿಲ್ಲ. ತಮಿಳು ಮತ್ತು ಕೇರಳಗಳಲ್ಲಿನ ಕನ್ನಡಿಗರಿಗೆ ಆಗುತ್ತಿರುವ ದಿನನಿತ್ಯದ ಹಿಂಸೆ ನಿಲ್ಲಲಿಲ್ಲ. ಈ ಸೋದರರ ಗೋಳಿನ ಕಣ್ಣೀರಿನಲ್ಲಿ ಕರ್ನಾಟಕದವರೇ ಆದ ಕನ್ನಡಿಗರು ಕೈ ತೊಳೆಯುತ್ತಿರುವುದು ತಪ್ಪಿಲ್ಲ!

"ಮನಸ್ಸಿನ ಗಾಯ ಮಾಯಿಸಲು ಕಾಲ ಒಂದು ಒಳ್ಳೆಯ ಮುಲಾಮು ಎನ್ನುತ್ತಾನೆ ಷೇಕ್ಸಪಿಯರ್".[೨] ಅದು ಸತ್ಯ ಕಾಲಗತಿಯಲ್ಲಿ ಎಲ್ಲವೂ ಕೊಚ್ಚಿಹೋದಂತೆ, ನೋವಿನಲ್ಲೇ ನಲಿವು ಕಾಣುತ್ತಾ, ಗಡಿನಾಡ ಕನ್ನಡಿಗರು ಗತಕಾಲದ ಕನ್ನಡಿಗರೆನಿಸಿಕೊಂಡು ಬಾಳುವುದು ನಿಜಕ್ಕೂ ಒಂದು ದೊಡ್ಡ ದುರಂತ.

---

೧. ಪ್ರೊ. ಜಿ.ವೆಂಕಟಸುಬ್ಬಯ್ಯರ ಕರ್ನಾಟಕ ಏಕೀಕರಣದ ಅನುಭವಗಳು, ಪುಟ. ೯೮.

೨. ಅದೇ., ಪುಟ. ೭೦.

ಕರ್ನಾಟಕ ಏಕೀಕರಣದ ಇಷ್ಟೆಲ್ಲ ಗೊಂದಲ ಸಮಸ್ಯೆ, ಅದಕ್ಕೆ ಇದ್ದಂತಹ ಅಡೆತಡೆಗಳ ನಡುನಡುವೆಯೇ ಏಕೀಕರಣ ಹೋರಾಟದ ಪ್ರೇರಣೆಯಿಂದ ನವೋದಯ ಕವಿಗಳು ನಾಡುನುಡಿಯನ್ನು ಕುರಿತ ಕವಿತೆಗಳನ್ನು ಬರೆದಿದ್ದಾರೆ. ಆ ಮೂಲಕ ಕನ್ನಡ ಜನತೆಯು ಕೂಡ ಎಚ್ಚೆತ್ತು ಹೋರಾಟ ಮಾಡುವಲ್ಲಿ ಸಹಕಾರಿಯಾಗಿದೆ.

ಒಟ್ಟಿನಲ್ಲಿ ನವೋದಯ ಸಾಹಿತಿಗಳು ಕಥೆ, ಕಾವ್ಯ, ನಾಟಕ, ಕಾದಂಬರಿ, ಗದ್ಯ, ವಿಮರ್ಶೆ ಹೀಗೆ ಎಲ್ಲಾ ಬಗೆಯ ಸೃಜನಶೀಲ ಸಾಹಿತ್ಯಕ್ಕೆ ಸ್ಮರಣೀಯವಾದ ಕೊಡುಗೆಯನ್ನು ನೀಡಿದ್ದಾರೆ. ದೀರ್ಘಕಾಲದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹತ್ತನೆಯ ಶತಮಾನ ಮಹತ್ವದ ಯುಗಗಳಾಗಿರುವಂತೆ ಈ ಇಪ್ಪತ್ತನೆಯ ಶತಮಾನವು ವೈವಿಧ್ಯ, ವೈಶಿಷ್ಟ್ಯ, ಮೌಲಿಕತೆ ಮೊದಲಾದ ದೃಷ್ಟಿಯಿಂದ ಅಸಾಧಾರಣ ಯುಗವೇ ಆಗಿದೆ. ಅದರಲ್ಲಿ ನವೋದಯ ಸಾಹಿತ್ಯ ಈ ಶತಮಾನದ ಶಿರೋರತ್ನದಂತಿದೆ.

# ಅಧ್ಯಾಯ – ೩

# ನವೋದಯ ಕಾವ್ಯದಲ್ಲಿ ನಾಡಪ್ರಜ್ಞೆ

'ನಾಡಪ್ರಜ್ಞೆ' ಎಂದಾಗ ನಾವು ಗಮನಿಸಬೇಕಾದುದು "ನಾಡು" ಎಂದರೆ ಏನು? ನಾಡು ಎಂದರೆ, ಒಂದು ನಿರ್ದಿಷ್ಟ ಎಲ್ಲೆಯನ್ನು ಹೊಂದಿರುವ, ಒಂದು ನಿರ್ದಿಷ್ಟವಾದ ಭಾಷೆಯನ್ನಾಡುವ, ಒಂದು ನಿರ್ದಿಷ್ಟ ಸಂಸ್ಕೃತಿಯನ್ನು ಹೊಂದಿರುವಂತಹ ಪ್ರದೇಶ. ಮುಖ್ಯವಾಗಿ ನಾಡುಗಳನ್ನು ವಿಭಾಗಮಾಡುವುದೇ ಭಾಷೆಯ ಆಧಾರದ ಮೇಲೆ, ಹಾಗಾಗಿ ಯಾವ ಒಂದು ಪ್ರದೇಶದಲ್ಲಿ ವ್ಯವಹರಿಕವಾಗಿ ಮತ್ತು ಖಾಸಗಿಯಾಗಿ ಒಂದೇ ಭಾಷೆಯನ್ನು ಆಡುತ್ತಾ ಅಲ್ಲಿಯವರೆಲ್ಲಾ ಒಂದೇ ರೀತಿಯ ಸಂಸ್ಕೃತಿಯನ್ನು ಹೊಂದಿರುತ್ತಾರೋ, ಅದನ್ನು ಒಂದು ಪ್ರದೇಶವನ್ನಾಗಿ ವಿಭಾಗ ಮಾಡುತ್ತಾರೆ. ಉದಾ: ಕನ್ನಡ ಭಾಷೆಯನ್ನು ಮಾತನಾಡುವ ಪ್ರದೇಶವನ್ನು ಕರ್ನಾಟಕ. ತಮಿಳುಭಾಷೆಯನ್ನಾಡುವ ಪ್ರದೇಶವನ್ನು ಕರ್ನಾಟಕ. ತಮಿಳು ಭಾಷೆಯನ್ನಾಡುವ ಪ್ರದೇಶವನ್ನು ತಮಿಳುನಾಡು. ಹೀಗೆ ಭಾಷೆಯ ಆಧಾರದ ಮೇಲೆಯೇ ರಾಜ್ಯಗಳನ್ನು ವಿಂಗಡಣೆ ಮಾಡಲಾಗಿದೆ.

'ನಾಡಪ್ರಜ್ಞೆ' ಎಂದಾಗ ಅದು ನಮ್ಮ ನಾಡು, ನಮ್ಮ ಭಾಷೆ, ನಮ್ಮ ಜನ, ನಮ್ಮ ಸಂಸ್ಕೃತಿ, ಎಂಬ ಅಭಿಮಾನ ಹೆಚ್ಚಾಗಿ ಕಾಣಬೇಕು. ಯಾವ ಕಾರಣಕ್ಕೂ ನಮ್ಮದು, ನಮ್ಮವರು ಎಂಬ ಅಭಿಮಾನವನ್ನು ಬಿಡಬಾರದು. ಹೊರಗಿನವರು ಅದನ್ನು ಆಕ್ರಮಿಸಿಕೊಳ್ಳಲು ಬಂದರೆ ಅದರ ವಿರುದ್ಧ ಹೋರಾಟ ಮಾಡಬೇಕು. ನಮ್ಮ ತನವನ್ನು ಉಳಿಸಿಕೊಳ್ಳಬೇಕು. ಅದು ನಾಡಪ್ರಜ್ಞೆ, ನಮ್ಮ ನಾಡಿನ ಬಗ್ಗೆ ನಾವು ಸದಾ ಜಾಗರೂಕರಾಗಿರಬೇಕು. ಆದರೆ ನಮ್ಮ ಕರ್ನಾಟಕದಲ್ಲಿ ಆದದ್ದೆ ಬೇರೆ. ನಮ್ಮ ನಾಡಿನ ಬಗ್ಗೆ ಜನರಲ್ಲಿ ಅರಿವಿಲ್ಲದೆ, ಅನ್ಯರಿಂದ ಕನ್ನಡನಾಡು ಛಿದ್ರಛಿದ್ರವಾಯಿತು. ಅದನ್ನು ಮತ್ತೆ ಏಕೀಕರಣಗೊಳಿಸುವಲ್ಲಿ ಹಲವಾರು ಕ್ರಾಂತಿಕಾರರು ಹೋರಾಟ ಮಾಡಿದ್ದಾರೆ. ಅದಕ್ಕೆ ಪ್ರೇರಣೆಯಾಗಿ ನವೋದಯ ಕವಿಗಳು ತಮ್ಮದೇ ಆದ ರೀತಿಯಲ್ಲಿ ಕನ್ನಡಿಗರನ್ನು ಹುರುದುಂಬಿಸುತ್ತಾ ಬರವಣಿಗೆಯ ಹೋರಾಟ ಮಾಡಿದ್ದಾರೆ.

ನವೋದಯ ಕಾಲದ ಸಾಹಿತ್ಯದ ಮೇಲೆ ಇಂಗ್ಲಿಷ್ ಸಾಹಿತ್ಯ ಹೇಗೆ ಪ್ರಭಾವ ಬೀರಿತೋ ಹಾಗೆಯೇ ಕರ್ನಾಟಕ ಏಕೀಕರಣ ಸಂದರ್ಭವು ಕೂಡ ಅತ್ಯಂತ ದೊಡ್ಡ ಪ್ರಮಾಣದ ಪ್ರೇರಕ ಶಕ್ತಿಯಾಗಿದೆ. ನವೋದಯ ಕಾಲದ ಪ್ರಮುಖ ಕವಿಗಳಾದ ಬಿ.ಎಂ.ಶ್ರೀ., ಕುವೆಂಪು, ಬೇಂದ್ರೆ, ಗೋವಿಂದ ಪೈ, ಡಿ.ವಿ.ಜಿ., ಪು.ತಿ.ನ., ಪಂಜೆ

ಮಂಗೇಶರಾವ್, ಜಿ.ಎಸ್.ಶಿವರುದ್ರಪ್ಪ, ತೀ.ನಂ.ಶ್ರೀ., ಎ.ಆರ್.ಕೃಷ್ಣಶಾಸ್ತ್ರೀ, ಬೆಟಗೇರಿ ಕೃಷ್ಣಶರ್ಮ, ಎ.ಎನ್.ಮೂರ್ತಿರಾವ್, ಕೆ.ಎಸ್. ನರಸಿಂಹಸ್ವಾಮಿ, ಇವರಿಂದ ಹಿಡಿದು ಇತ್ತೀಚಿನ ಕವಿಗಳವರೆಗೂ ಕೂಡ ಕರ್ನಾಟಕ ಏಕೀಕರಣ ಚಳುವಳಿ ಪ್ರೇರಣೆಯಾಗಿರುವುದನ್ನು ಗಮನಿಸಬಹುದು.

ನವೋದಯ ಕಾಲದ ಕವಿಗಳ ಮೇಲೆ ಕರ್ನಾಟಕ ಏಕೀಕರಣ ಚಳುವಳಿ ಪ್ರೇರಣೆ ನೀಡಿತು. ಆ ಮೂಲಕ ಅವರೆಲ್ಲರೂ ಕರ್ನಾಟಕ ಏಕೀಕರಣದ ಬಗ್ಗೆ ಕವನಗಳ ಮೂಲಕ ತಮ್ಮದೇ ಆದ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಹಾಗೆ ನವೋದಯ ಕಾಲದ ಕವಿಗಳ ಕವನಗಳ ಪ್ರೇರಣೆಯಿಂದಾಗಿ ಕರ್ನಾಟಕ ಏಕೀಕರಣ ಚಳುವಳಿ ಸಾಗಿತು ಎಂಬುದನ್ನೂ ಗಮನಿಸಬಹುದು. ಅಂದರೆ ನವೋದಯ ಕವಿಗಳ ಮೇಲೆ ಏಕೀಕರಣದ ಪ್ರಭಾವ, ಹಾಗೆ ನವೋದಯ ಕವಿಗಳ ಪ್ರೇರಣೆಯಿಂದಾಗಿ ಕರ್ನಾಟಕ ಏಕೀಕರಣ ಚಳುವಳಿ ಸಾಗಿತು ಎಂಬುದನ್ನು ಗಮನಿಸಬಹುದು.

ಒಟ್ಟಾರೆ ನವೋದಯ ಕಾಲದ ಕವಿಗಳನ್ನು ಗಮನಿಸಿದಾಗ ಕೇವಲ ಸೌಂದರ್ಯ, ಕಲ್ಪನೆ, ರಸ ಇವುಗಳಿಗೆ ಮಾತ್ರ ಗಮನಕೊಡದೆ, ಹೋರಾಟದ ಹಾದಿಯಲ್ಲೂ ಕನ್ನಡನಾಡು, ನುಡಿಯ ಬಗ್ಗೆ ನಮ್ಮ ಸಾಹಿತಿಗಳಲ್ಲಿ ಅಭಿಮಾನ ಮೂಡಿರುವುದನ್ನು ಕವನಗಳ ಮೂಲಕ ಗಮನಿಸಬಹುದು. ಅಖಂಡ ಕರ್ನಾಟಕದ ಕಲ್ಪನೆ ನವೋದಯ ಕವಿಗಳಲ್ಲಿ ಬೇರೂರಿರುವುದನ್ನು ಕಾಣಬಹುದು.

ನವೋದಯ ಸಾಹಿತ್ಯ ಕವಿಗಳಲ್ಲಿ ಪ್ರಮುಖರಾದ, ನಮ್ಮೆಲ್ಲರಿಗೂ ಅಗ್ರಗಣ್ಯರಾಗಿ ಕಾಣಿಸಿಕೊಳ್ಳುವ ರಾಷ್ಟ್ರಕವಿ, ರಸಋಷಿ ಕುವೆಂಪು ಅವರ ಕವನಗಳನ್ನು ಗಮನಿಸಿದಾಗ ಅವರಲ್ಲಿ ಅಖಂಡ ಕರ್ನಾಟಕದ ಕಲ್ಪನೆ ಹೇಗೆ ಮೂಡಿಬಂದಿದೆ ಎಂಬುದನ್ನು ಗಮನಿಸಬಹುದು.

ದೇ.ಜ.ಗೌ. ಅವರು ಹೇಳುವಂತೆ "ಕುವೆಂಪು ಅವರು ಇಡೀ ಕರ್ನಾಟಕದ ಪ್ರತಿನಿಧಿಯೆಂಬಂತೆ, ಭುವನೇಶ್ವರಿಯೆ ಮೈದುಂಬಿಕೊಂಡಂತೆ ಏಕೀಕರಣದ ಬಗ್ಗೆ ಹೋದಡೆಯಲ್ಲೆಲ್ಲ ಪ್ರಚಾರ ಮಾಡುತ್ತಿದ್ದರಲ್ಲದೆ ಲೇಖನ, ಕವನಗಳ ಮೂಲಕವೂ ಕನ್ನಡಿಗರನ್ನು ಪ್ರಚೋದಿಸುತ್ತಿದ್ದರು"[೧] ಅವರು ನಾಡನ್ನು ಕುರಿತಾದ ಹಲವಾರು ಪದ್ಯಗಳನ್ನು ಗಮನಿಸಬಹುದು. ಉದಾ.ಗೆ ಅವರ ಅಖಂಡ ಕರ್ನಾಟಕ ಎಂಬ ಕವನ ಹಳೆಯ ಮೈಸೂರಿನ ಜನರನ್ನು ಜಾಗೃತಗೊಳಿಸಿತೆಂಬುದನ್ನು ನಾವು ನೆನಪಿಡಬೇಕು.

---

೧. ಪ್ರೊ. ಜಿ.ವೆಂಕಟಸುಬ್ಬಯ್ಯರ 'ಕರ್ನಾಟಕ ಏಕೀಕರಣದ ಅನುಭವಗಳು', ಪುಟ. ೧೬.

ಕನ್ನಡ ನಾಡಿನಲ್ಲಿ ತಾಂಡವವಾಡುತ್ತಿದ್ದಂತಹ ಅಂತಃಕಲಹ, ವೈರ, ವೈಮನಸ್ಸು, ದ್ವೇಷಾಸೂಯೆಗಳನ್ನು ಕಂಡ ಮಹಾಕವಿ ಕುವೆಂಪು ಅವರು ೧೯೬೧ರಷ್ಟು ಹಿಂದೆಯೇ ವೇದನೆಗೊಂಡು ಪ್ರವಾದಿಯಂತೆ 'ಕನ್ನಡ ಡಿಂಡಿಮ'ವನ್ನು ರಚಿಸಿ ನಾಡಿನ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ತಮ್ಮ ಶಂಕೆ, ಅನುಕಂಪೆ, ಸಹಾನುಭೂತಿಯನ್ನು ವ್ಯಕ್ತಪಡಿಸಿದ್ದಾರೆ.

ಬಾರಿಸು ಕನ್ನಡ ಡಿಂಡಿಮವ
ಓ ಕರ್ನಾಟಕ ಹೃದಯಶಿವ
ಸತ್ತಂತಿಹರನು ಬಡಿದೆಚ್ಚರಿಸು
ಹೊಟ್ಟೆಯ ಕಿಚ್ಚಿಗೆ ತಣ್ಣೀರ್ಸುರಿಸು
ಕಚ್ಚಾಡುವವರನು ಕೂಡಿಸಿ ಒಲಿಸು
ಒಟ್ಟಿಗೆ ಬಾಳುವ ತೆರದಲಿ ಹರಸು[೧]

ಕುವೆಂಪುರವರು ಕನ್ನಡನಾಡಿನ ಜನತೆ ಹೇಗಿರಬೇಕು ಎಂದರೆ ಯಾವುದೇ ಅನ್ಯಾಯ ನಡೆಯುತ್ತಿದ್ದರು, ಅದನ್ನು ನೋಡಿಯೂ ನೋಡದೇ ಇದ್ದಂತೆ ಇರುವವರನ್ನು ಮೇಲ್ವರ್ಗದ ಜನತೆ ಕೆಳವರ್ಗದವರನ್ನು ತುಳಿಯುತ್ತಿದ್ದರು. ಅದನ್ನು ಪ್ರಶ್ನೆ ಮಾಡದೆ ಸತ್ತಂತೆ ಅಂದರೆ ಹೆಣದ ರೀತಿಯಲ್ಲಿ ನಿಶ್ಚಲವಾಗಿರುವವರನ್ನು ಬಡಿದೆಚ್ಚರಿಸು, ನಮ್ಮನಮ್ಮೊಳಗೆ ದ್ವೇಷ ಅಸೂಯೆಯಿಂದ ಕಚ್ಚಾಡಿ ಬೇರೆಬೇರೆಯಾಗಿದ್ದೇವೆ. ಇದನ್ನು ಪರದೇಶಿಗಳು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಿದ್ದಾರೆ. ಅಂಥವರನ್ನು ಒಂದುಗೂಡಿಸಿ ನಮ್ಮ ನಾಡಿಗಾಗಿ ಹೋರಾಟಮಾಡಿ ಒಟ್ಟಿಗೆ ಬಾಳುವಂತೆ ಮಾಡಬೇಕು ಎಂಬ ಕರೆ ನೀಡಿದ್ದಾರೆ.

ಕೊನೆಗೆ 'ಸರ್ವೋದಯವಾಗಲಿ ಸರ್ವರಲಿ' ಎಂದು ಪ್ರಾರ್ಥಿಸುತ್ತಾರೆ. ಈ ಕವಿತೆಯಲ್ಲಿ ನಾಡ ಭವಿಷ್ಯದ ಬಗೆಗಿನ ಅವರ ಆತಂಕ ಹೆಪ್ಪುಗಟ್ಟಿದೆ. ನಾಡಿನ ಎಲ್ಲ ಕಡೆಯ ಜನರು, ಮುಖಂಡರು ಮತ್ತು ಅಧಿಕಾರಸ್ಥರು ಜಾತಿಬೇಧ, ಪಕ್ಷಬೇಧ, ವರ್ಗಭೇದಗಳನ್ನು ಮರೆತು ಒಕ್ಕೊರಲಿನಿಂದ ಕೂಗಿ ಒಮ್ಮನಸ್ಸಿನಿಂದ ದುಡಿಯಬೇಕು ಎಂದು ಹೇಳುತ್ತಾರೆ.

---

೧. ಮಂಜುನಾಥ.ಕೆ ಅವರ ನಾಡಗೀತೆಗಳು, ಪುಟ. ೩೧.

ಹಾಗೆ ಕುವೆಂಪು ಅವರ 'ಎಲ್ಲಾದರೂ ಇರು' ಕವನವನ್ನು ಗಮನಿಸಿದಾಗ ಅವರ ನಾಡಪ್ರಜ್ಞೆ ಹೇಗೆ ಮಡುಗಟ್ಟಿ ನಿಂತಿದೆ ಎಂಬುದನ್ನು ಕಾಣಬಹುದು. ಅವರ ಕನ್ನಡನಾಡಿನ ಭೂಮಾರೂಪವನ್ನು ಗಮನಿಸಬಹುದು.

ಎಲ್ಲಾದರೂ ಇರು, ಎಂತಾದರೂ ಇರು
ಎಂದೆಂದಿಗೂ ನೀ ಕನ್ನಡವಾಗಿರು[೧]

ಕವಿ ಕನ್ನಡಿಗರಿಗೆ ನೀವು ಎಲ್ಲಾದರೂ ಇರಿ, ಹೇಗಾದರೂ ಇರಿ. ಆದರೆ ನಮ್ಮ ಕನ್ನಡ ನಾಡನ್ನು ಮರೆಯಬೇಡಿ, ನಾವು ಕನ್ನಡಿಗರು ಅಭಿಮಾನಿಗಳಾಗಿರಬೇಕು. ಕನ್ನಡನಾಡನ್ನು ಉಳಿಸಿಕೊಳ್ಳಬೇಕು ಎಂದು ಹೇಳುತ್ತಾರೆ.

ಮುಂದಿನ ಪದ್ಯದಲ್ಲಿ ಕರ್ನಾಟಕವನ್ನು ಕವಿ ಹೇಗೆ ನಮ್ಮ ಕಣ್ಮುಂದೆ ಕಟ್ಟಿಕೊಡುತ್ತಾರೆ ಎಂಬುದನ್ನು ಗಮನಿಸಬಹುದು.

ನೀ ಮೆಟ್ಟುವ ನೆಲ ಅದೇ ಕರ್ನಾಟಕ
ನೀನೇರುವ ಮಲೆ ಸಹ್ಯಾದ್ರಿ
ನೀ ಮುಟ್ಟುವ ಮರ ಶ್ರೀಗಂಧದ ಮರ
ನೀ ಕುಡಿಯುವ ನೀರ ಕಾವೇರಿ
ಪಂಪನನೋದುವ ನಿನ್ನಾ ನಾಲಗೆ
ಕನ್ನಡವೇ ಸತ್ಯ
ಕುಮಾರವ್ಯಾಸನನಾಲಿಪ ಕಿವಿಯದು
ಕನ್ನಡವೇ ನಿತ್ಯ.[೨]

ನಾವು ಯಾವುದೆ ಜಾಗದಲ್ಲಿದ್ದರು ಅದು ವಿದೇಶವಾಗಬಹುದು ಅಥವಾ ಭಾರತದ ಯಾವ ಮೂಲೆಯಲ್ಲಾದರು ಇರಲಿ, ಎಲ್ಲಾದರೂ ಇರಲಿ ನಾವಿರುವ ಜಾಗವೇ ಕರ್ನಾಟಕ ಎಂಬ ಭಾವನೆ, ಪ್ರೀತಿ ನಮ್ಮಲ್ಲಿರಬೇಕು. ಯಾವುದೇ ಬೆಟ್ಟವೇರಿದರು ಅದನ್ನು ಸಹ್ಯಾದ್ರಿ ಬೆಟ್ಟವೆಂದೇ ತಿಳಿಯಬೇಕು. ಯಾವುದೇ ಮರ ಮುಟ್ಟಿದರು ಅದು ಶ್ರೀಗಂದ, ಯಾವ ನೀರು ಕುಡಿದರೂ ಅದು ಕಾವೇರಿ, ಕನ್ನಡ ಕಾವ್ಯಗಳನ್ನು ಓದುವ, ಕೇಳುವ ನಮ್ಮ ನಾಲಿಗೆ, ಕಿವಿ, ಸತ್ಯ ನಿತ್ಯ ಎಂಬುದಾಗಿ ಹೇಳುತ್ತಾರೆ.

---

೧. ಮಂಜುನಾಥ.ಕೆ ಅವರ ನಾಡಗೀತೆಗಳು, ಪುಟ. ೩೨.
೨. ಅದೇ.

ಅಂದರೆ ಇಲ್ಲಿ ಕರ್ನಾಟಕ ಎಂದರೆ ಸಹ್ಯಾದ್ರಿ ಬೆಟ್ಟ, ಶ್ರೀಗಂಧದ ಮರ, ಕಾವೇರಿ ನೀರು ಇವು ಕನ್ನಡ ನಾಡಿನ ಕಲ್ಪನೆಯನ್ನು ನಮ್ಮ ಕಣ್ಮುಂದೆ ತರುತ್ತವೆ. ಹಾಗೆ ಹಾಳಾದ ಹಂಪೆ, ಪಂಪನ ಬನವಾಸಿ, ಬೇಲೂರು, ಜೋಗ ಜಲಪಾತ, ಮಲೆನಾಡು ಇವು ಕನ್ನಡನಾಡು ಎಂದರೆ ಯಾವುದು ಎಂಬುದನ್ನು ಪ್ರತಿನಿಧಿಸುತ್ತದೆ.

ಒಟ್ಟಾರೆ ಕನ್ನಡ ನಾಡಿನ ಜನರು ಎಲ್ಲಿದ್ದರೇನು ಹೇಗಿದ್ದರೆ ಏನು ಎಂದೆಂದಿಗೂ ಕನ್ನಡಿಗರಿಗೆ ಕನ್ನಡವೇ ಸತ್ಯ, ಕನ್ನಡವೇ ನಿತ್ಯ, ಅವರ ಸರ್ವಸ್ವವು ಕನ್ನಡವೇ, ಕನ್ನಡ ನಾಡೇ ಎಂದು ಕವಿ ಕುವೆಂಪು ಅವರು ಹೇಳುತ್ತಾರೆ.

ಕುವೆಂಪು ಅವರು ಬರೆದ ಕವನಗಳಲ್ಲಿ ನಾಡಗೀತೆಯಾಗಿ ಸ್ವೀಕರಿಸಿರುವ 'ಜಯಹೇ ಕರ್ನಾಟಕ ಮಾತೆ' ಕವನದಲ್ಲಿ ಕನ್ನಡ ನಾಡಿನ ಕಲ್ಪನೆಯನ್ನು ಅಖಂಡ ಕರ್ನಾಟಕವನ್ನು ಭವ್ಯವಾಗಿ ಕಟ್ಟಿಕೊಟ್ಟಿದ್ದಾರೆ.

> "ಜೈ ಭಾರತ ಜನನಿಯ ತನುಜಾತೆ
> ಜಯಹೇ ಕರ್ನಾಟಕ ಮಾತೆ"[೧]

ಭಾರತಮಾತೆಯ ಮಗಳು ಕರ್ನಾಟಕ ಎಂದು ಹೇಳುತ್ತಾ ನಮ್ಮ ನಾಡು ನದಿ, ವನಗಳ, ರಸಋಷಿಗಳ ಬೀಡು. ಈ ಭೂಮಿಗೆ ನಮ್ಮ ಕನ್ನಡನಾಡು ಕಿರೀಟವಿದ್ದಂತೆ. ಈ ನಾಡು ಗಂಧದ ನಾಡು, ಚಂದದ ನಾಡು, ಹೊನ್ನಿನಗಣಿ, ರಾಘವಾಂಕ, ಮಧುಸೂದನರು ಅವತರಿಸಿದ ಪುಣ್ಯ ನಾಡು ಎಂಬುದನ್ನು ಕಣ್ಣಿಗೆ ಕಟ್ಟುವಂತೆ ಹೇಳಿದ್ದಾರೆ.

ಕನ್ನಡ ನಾಡು ತಾಯಿಯ ಜೋಗುಳದಿಂದ ವೇದಮಂತ್ರಗಳಿಂದ, ಹಸುರಿನ ಬೆಟ್ಟಗಳ ಸಾಲಿನಿಂದ ತುಂಬಿದೆ. ಶಂಕರಾಚಾರ್ಯ, ರಾಮಾನುಜಚಾರ್ಯ, ವಿದ್ಯಾರಣ್ಯರಂತಹ ಗುರುಗಳು, ಬಸವೇಶ್ವರ, ಮಧ್ವರು ಇದ್ದಂತಹ ದಿವ್ಯವಾದ ಸ್ಥಳ. ಕನ್ನಡನಾಡು ರನ್ನ, ಷಡಕ್ಷರಿ ಪೊನ್ನ, ಪಂಪ, ಜನ್ನ, ಕವಿಗಳು ಜನಿಸಿದ ಕರುನಾಡು ಎಂಬುದಾಗಿ ಹೇಳುತ್ತಾರೆ.

ಕನ್ನಡ ನಾಡಿನ ಭವ್ಯತೆಯನ್ನು ಸಾರುತ್ತ ತೈಲಪ, ಹೊಯ್ಸಳರು ಆಳ್ವಿಕೆ ಮಾಡಿದ ನಾಡು. ಡಂಕಣ, ಜಕ್ಕಣಚಾರ್ಯರು ಕಲೆಯನ್ನು ಕೆತ್ತಿದ ಬೀಡು, ಕೃಷ್ಣ, ಶರಾವತಿ, ಕಾವೇರಿ, ಹರಿಯುವಂತಹ ನೆಲೆ, ಚೈತನ್ಯ ಪರಮಹಂಸ, ವಿವೇಕಾನಂದರು ಬೋಧಿಸಿದ

೧. ಮಂಜುನಾಥ.ಕೆ ಅವರ ನಾಡಗೀತೆಗಳು, ಪುಟ. ೩೧.

ಪುಣ್ಯನಾಡು ಎಂಬುದಾಗಿ ಹೇಳುತ್ತಾ ಮುಂದೆ ಕನ್ನಡ ನಾಡು ಹೇಗಿದೆ ಎಂಬುದನ್ನು ತಿಳಿಸುತ್ತಾ

> ಸರ್ವ ಜನಾಂಗದ ಶಾಂತಿಯ ತೋಟ
> ರಸಿಕರ ಕಂಗಳ ಸೆಳೆಯುವ ನೋಟ
> ಹಿಂದೂ ಕ್ರೈಸ್ತ ಮುಸಲ್ಮಾನ
> ಪಾರಸಿಕ ಜೈನರುದ್ಯಾನ[೧]

ಎಂಬುದಾಗಿ ಹೇಳುತ್ತಾ ನಮ್ಮ ನಾಡು ಸರ್ವ ಜನಾಂಗದವರು ವಾಸಿಸುವ ಶಾಂತಿಯುತವಾದ ತೋಟ, ಅಲ್ಲಿ ಯಾವುದೇ ಗಲಾಟೆಗಳು ಸಂಭವಿಸುವುದಿಲ್ಲ. ಸಂಭವಿಸಿದರೂ ಶಾಂತಿಯುತವಾಗಿಯೇ ಮುಕ್ತಾಯಗೊಳ್ಳುತ್ತದೆ. ರಸಿಕರನ್ನು ಸೆಳೆಯುವ ಶಾಂತಿಯ ಧಾಮ ನಮ್ಮ ಕನ್ನಡ ನಾಡು. ಹಿಂದೂ, ಕ್ರೈಸ್ತ, ಮುಸಲ್ಮಾನ, ಜೈನರು, ಎಲ್ಲಾ ಧರ್ಮದವರು ವಾಸಿಸುವ ಉದ್ಯಾನವನ ನಮ್ಮ ನಾಡು.

ನಮ್ಮ ಕನ್ನಡ ನಾಡಿನಲ್ಲಿ ಶೌರ್ಯದಿಂದ ಆಳ್ವಿಕೆ ಮಾಡಿದ ದೊರೆಗಳಿದ್ದರು. ಉತ್ತಮ ಗಾಯಕರಿದ್ದರು, ಸಂಗೀತಗಾರರಿದ್ದರು, ಅವರೆಲ್ಲರಿಂದಲೂ ತುಂಬಿ ತುಳುಕುತ್ತಿರುವ ನಾಡು ನಮ್ಮ ಕನ್ನಡ ನಾಡು ಎಂಬುದಾಗಿ ತಿಳಿಸುತ್ತಾರೆ.

ಪ್ರಸ್ತುತ ಕವಿತೆಯ ಮುಖಾಂತರ ಕನ್ನಡನಾಡು ಎಂದರೆ ಏನು ಎಂಬುದನ್ನು ಗೊತ್ತಿಲ್ಲದೆ ಇರುವವರು ಕೂಡ ಈ ನಾಡಗೀತೆಯನ್ನು ಕೇಳಿದರೆ ಕನ್ನಡನಾಡು ಎಂದರೆ ಏನು, ಅದರ ಇತಿಹಾಸ ಭವ್ಯತೆ, ವೈಭವ, ಸಂಪತ್ತು ಎಲ್ಲವನ್ನು ಒಮ್ಮೆಲೆ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಕನ್ನಡದ ಕವಿಗಳಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು ಮುಖ್ಯವಾಗಿ ನಿಲ್ಲುತ್ತಾರೆ. ಸಣ್ಣಕಥೆಗಳ ಜನಕ ಎಂದೇ ಪ್ರಖ್ಯಾತರಾದ ಮಾಸ್ತಿಯವರು ಕೂಡ ಕನ್ನಡನಾಡಿನ ಪರಿಸ್ಥಿತಿಯನ್ನು ಕಂಡು ಜನರನ್ನು ಎಚ್ಚರಿಸುವ ಸಲುವಾಗಿಯೇ "ಕನ್ನಡ ನಾಡಿನ ಸ್ಥಿತಿಯನ್ನು ನೆನೆದು" ಎಂಬ ಕವನವನ್ನು ಪ್ರಸ್ತುತಪಡಿಸಿದ್ದಾರೆ. ಕರ್ನಾಟಕ ಏಕೀಕರಣಕ್ಕೂ ಮುನ್ನ ಕನ್ನಡ ನಾಡಿನ ಸ್ಥಿತಿ ಹೇಗಿತ್ತು ಎಂಬುದನ್ನು ತಿಳಿಸುತ್ತ ಮುಂದೆ ನಾವು ಹೇಗಿರಬೇಕು? ಎಂಬುದನ್ನು ತಿಳಿಸಿದ್ದಾರೆ.

---

೧. ಮಂಜುನಾಥ.ಕೆ ಅವರ ನಾಡಗೀತೆಗಳು, ಪುಟ. ೩೫.

ಹರಿದು ತುಂಡಾಗಿಹುದು ಇಂದು ಕನ್ನಡ ನಾಡು;
ಅಣ್ಣ ತಮ್ಮಂದಿರು ತಾವಣ್ಣ ತಮ್ಮಂದಿರೆಂದು
ತಿಳಿಯಲಾರರು ನಡೆಯಲಾರರು; ಬಾ ಬಂಧು
ಎಂದು ಕರೆಯಲು; ಸ್ವಾಮಿ ನನ್ನೂರುಧಾರ್ವಾಡ,
ನನ್ನೂರು ಮೈಸೂರು, ನನ್ನೂರು ಎರಕಾಡು
ಮರ್ಯಾದೆಯಿಂದ ಕರೆಯಿಸಿ ನನ್ನ ಎನ್ನುವರು[೧]

ಕನ್ನಡ ನಾಡು, ನಾವೆಲ್ಲ ಒಂದು ಎಂಬ ಭಾವನೆಗೆ ಅವಕಾಶವಿಲ್ಲದಂತೆ ನನ್ನೂರು ಬೇರೆ ನಿಮ್ಮೂರು ಬೇರೆ ಎಂಬ ಭೇದಭಾವಗಳು ತುಂಬಿತ್ತು. ಆದರೆ ನಾವೆಲ್ಲ ಒಂದು ಮನೆಯವರು ಮೈಸೂರು, ಧಾರ್ವಾಡ ಎಂಬ ಊರು ಬೇರೆ ಬೇರೆಯಾದರು ನಾವೆಲ್ಲರೂ ಕನ್ನಡನಾಡಿನವರು ಎಂಬ ಭಾವನೆ ಬೆಳೆಯಬೇಕು. ನಮ್ಮೆಲ್ಲರನ್ನು ಪಡೆದುದು ಒಂದೇ ಬಸಿರು ಎಂಬ ಭಾವನೆ ನಮ್ಮಲ್ಲಿ ಬಂದರೆ ನಮಗೆ ಎದುರಾಗಿ ನಿಲ್ಲುವವರು ಯಾರು ಇಲ್ಲ. ಹಾಗಾಗಿ ಬನ್ನಿ ಸೋದರರೇ ನಾವೆಲ್ಲರೂ ಒಂದೇ ಎಂಬ ಭಾವನೆಯಿಂದ ಒಟ್ಟಾಗಿ ಕರ್ನಾಟಕ ಏಕೀಕರಣದ ಜಯಕ್ಕಾಗಿ ದುಡಿಯೋಣ ಬನ್ನಿ ಎಂಬುದಾಗಿ ಮಾಸ್ತಿಯವರು ಕನ್ನಡನಾಡಿನ ಜನತೆಗೆ ಕರೆಯನ್ನು ನೀಡಿದ್ದಾರೆ.

ಮುಂದೆ ಭಾರತೀಯ ಕಾವ್ಯಮೀಮಾಂಸೆಯನ್ನು ಬರೆದಂತಹ ತೀ.ನಂ.ಶ್ರೀಕಂಠಯ್ಯನವರು ಕನ್ನಡ ನಾಡಿನ ದುಃಸ್ಥಿತಿಯನ್ನು ಕಂಡು "ಕನ್ನಡಿಗನ ಕೊರಗು" ಎಂಬ ಕವನದಲ್ಲಿ ಹೀಗೆ ಹೇಳುತ್ತಾರೆ.

ಸೊಕ್ಕಿನಲಿ ತಲೆಯೆತ್ತಿ ಜೊತೆಯವರ ಕೂಟದಲಿ
ನಾವು ಸಮ ನಿಮಗೆಂದು ನುಡಿವ ಬಲವಿಲ್ಲ![೨]

ನಾವು ಬೇರೆಯವರ ಕಾಲ್ತುಳಿತಕ್ಕೆ ಒಳಗಾಗಿದ್ದೇವೆ. ನಮ್ಮನಮ್ಮಲ್ಲಿಯೇ ಇದ್ದ ಒಡಕುಗಳಿಂದ ಬೇರೆಯವರು ನಮ್ಮನ್ನು ಕಡೆಗಣಿಸಿ ಅವರು ತಳ್ಳಿದ ಕಡೆಗೆ ಬೀಳುವಂತಹ ಸ್ಥಿತಿ ತಲುಪಿದ್ದೇವೆ. ನಮ್ಮಲ್ಲಿ ಹಣವಿಲ್ಲ, ಮೈಯಲ್ಲಿ ಶಕ್ತಿಯಿಲ್ಲ. ಕೇವಲ ಹೆಮ್ಮೆಯಿಂದ ನಮ್ಮದು ಕನ್ನಡನಾಡು ಎಂದು ಹೇಳಿಕೊಂಡು ಇಂದು ದಿಕ್ಕುಗೆಟ್ಟಿ ನಿಂತಿದ್ದೇವೆ. ನಮ್ಮ ಅಕ್ಕಪಕ್ಕದ ರಾಜ್ಯಗಳೆಲ್ಲ ಪ್ರತಿಸ್ಪರ್ಧಿಗಳಾಗಿ ಅಭಿವೃದ್ಧಿ

೧. ಬಿ.ಎಂ.ಶ್ರೀ ಅವರ ಕನ್ನಡ ಬಾವುಟ, ಪುಟ. ೧೩೮.
೨. ಅದೇ., ಪುಟ. ೧೦೪.

ಹೊಂದುತ್ತಿರುವಾಗ ಕನ್ನಡಿಗರು ಮಾತ್ರ ಸೊರಗಿಹೋಗಿದ್ದಾರೆ. ಆದ್ದರಿಂದ ಇನ್ನೂ ಮುಂದೆಯಾದರೂ ನಾವೆಲ್ಲ ಒಂದು ಎಂಬ ಒಗ್ಗಟ್ಟಿನಿಂದ ಸಾಗಿ ನಮ್ಮ ತಾಯಿಯನ್ನು ಉಳಿಸಿಕೊಳ್ಳೋಣ, ನಮ್ಮ ಹಿಂದಿನ ಖ್ಯಾತಿಯನ್ನು ಮತ್ತೆ ಪಡೆಯೋಣ, ಬೇರೆಯವರಿಗೆ ಸರಿಸಮಾನವಾಗಿ ನಿಲ್ಲೋಣ, ನೆಮ್ಮದಿಯಿಂದ ಬದುಕನ್ನು ನಡೆಸೋಣ ಎಂಬುದಾಗಿ ತೀ.ನಂ.ಶ್ರೀ. ಕನ್ನಡಿಗರಿಗೆ ಪ್ರೇರಣೆಯನ್ನು ನೀಡುತ್ತಾ ಕರ್ನಾಟಕ ಏಕೀಕರಣಕ್ಕೆ ಬೆಂಬಲವಾಗಿ ನಿಂತರು.

ನವೋದಯ ಕಾಲದ ಆಚಾರ್ಯ ಪುರುಷರು ಎಂದೇ ಪ್ರಸಿದ್ಧರಾದ ಬಿ.ಎಂ.ಶ್ರೀ.ಯವರು ಕನ್ನಡನಾಡು ಹೆಮ್ಮೆಯ ಬೀಡು ಎಂದು ಹೇಳುತ್ತಾ ಕನ್ನಡ ನಾಡು ಹೇಗಿದೆ. ಅದರ ಸೌಂದರ್ಯ, ಕನ್ನಡ ನಾಡಿನ ಜನ, ಅಲ್ಲಿನ ಭೌಗೋಳಿಕ ಸೌಂದರ್ಯ, ಅಲ್ಲಿನ ಸ್ಥಿತಿ ಹೇಗಿದೆ? ಎಂದು ಮುಂದೆ ಕನ್ನಡ ನಾಡನ್ನು ಹೇಗೆ ಬೆಳೆಸಬೇಕು ಎಂಬುದನ್ನು ತಿಳಿಸುತ್ತಾರೆ.

ಬಿ.ಎಂ.ಶ್ರೀ.ಯವರು ತಮ್ಮ ಕವನಗಳಲ್ಲಿ ಕನ್ನಡನಾಡು ಮತ್ತು ನುಡಿಯ ಬಗ್ಗೆ ತಮ್ಮದೇ ಆದ ಅಭಿಪ್ರಾಯಗಳನ್ನು ನೀಡುತ್ತಾರೆ. ಅವರ ಮುಖ್ಯ ಕವನಗಳಲ್ಲಿ 'ಕನ್ನಡ ತಾಯ ನೋಟ' ಒಂದು. ಶ್ರೀ ಅವರು ಹೇಳುವಂತೆ "ಬಳಸಿ ಬಂದೆನು ಸುತ್ತ ಕನ್ನಡದ ನಾಡುಗಳ ಸಿರಿಯ ನೋಡುತ್ತ ತಾಯಡಿಯ ಹುಡಿಯ ತಲೆಗಾನುತ್ತ, ಹರಕೆಯ ಪವಿತ್ರ ಯಾತ್ರೆಯು ಏನು ಚೆಲುವಿನ ನಾಡು! ಚೆಲುವು ಚೆಲ್ಲುವ ನಾಡು! ಕನ್ನಡದ ನಾಡು! ಏನು ಚಿನ್ನದ ನಾಡು! ನಮ್ಮೊಲುಮೆಯಾ ನಾಡು! ನಮ್ಮಿನಿಯ ನಾಡು!"[೧]

ನಮ್ಮ ನಾಡು ಚೆಲುವಿನನಾಡು, ಚಿನ್ನದ ನಾಡು, ಒಲುಮೆಯ ನಾಡು ಎಂದು ಹೇಳುತ್ತಾ, ಕಾವೇರಿಯಿಂದ ಗೋದಾವರಿವರೆಗೂ ಚಾಚಿರುವ ನಾಡು, ಅಲ್ಲಿನ ಹೊಲ ಕಪ್ಪು, ಬೆಟ್ಟ ಕಪ್ಪು, ಮೋಡ ಕಪ್ಪು, ಕೆರೆ ಕಪ್ಪು, ಏನೆಂದೆ? ತಪ್ಪು ತಪ್ಪು, ಮೂಡಣ, ಪಡುವಣ, ತೆಂಕಣ, ಬಡಗಣ ಯಾವ ಕಡೆ ತಿರುಗಿದರು. ಕರ್ನಾಟಕದ ಹೆಣ್ಣಿನ ನೋಟ ಬಲು ಚಂದ, ನಮ್ಮ ಕನ್ನಡ ತಾಯಿಯ, ದೇವಿಯ ಕಣ್ಣೋಟ ಕಪ್ಪೇ? ಎಂದು ವರ್ಣನೆ ಮಾಡುತ್ತಾರೆ.

ಮುಂದೆ ಕನ್ನಡ ನಾಡಿನ ಭೌಗೋಳಿಕ ಸೌಂದರ್ಯವನ್ನು ವರ್ಣಿಸುತ್ತ, ಚೆಲುವಿನ ಗಣಿ ಕಾರ್ವಾರದ ಎದೆ ತುಂಬಿ, ಗೋಕರ್ಣದಲ್ಲಿ ಮಿಂದ, ಉಡುಪಿಯ

---

೧. ಬಿ.ಎಂ.ಶ್ರೀ ಅವರ 'ಕನ್ನಡ ಬಾವುಟ', ಪುಟ. ೧೬೪.

ಕೃಷ್ಣನಿಗೆ ಕೈಮುಗಿದು, ಮಂಗಳೂರಿನ ನಂಟರೊಡನೆ ನಿಂತು, ಚಾರ್ಮುಡಿ ಘಾಟನ್ನು ಸುತ್ತಿ ಕಂಡೆ, ಮೇಲೆ ತಿಳಿಯಾದ ಆಕಾಶ, ದಟ್ಟವಾದ ಕಾಡು, ಅಲ್ಲಲ್ಲಿ ಹಕ್ಕಿಗಳ ಹಾಡು, ಅಲ್ಲಿ ದೇವಿಯ ದರ್ಶನವನ್ನು ಆ ಪುಣ್ಯ ಕರ್ನಾಟಕದ ದೇವಿಯನ್ನು ಕಂಡೆ ಎಂದು ಹೇಳುತ್ತಾ

ಕರ್ನಾಟಕದ ಹಂಪೆಯನ್ನು ನೆನಪಿಸಿಕೊಳ್ಳುತ್ತ, ತುಂಗಭದ್ರ ನದಿಯ ತಡಿಯ ಮೊರಡಿ ಕೂರಕಲಿನ ಬಿಸಿಲಿನಲಿ ಒಬ್ಬ ತಾಯಿ ಒಬ್ಬಳೇ ಕುಳಿತಿದ್ದಾಳೆ. ಯಾರಮ್ಮ ನೀನು? ಏಕೆ ಹೀಗೆ ಒಬ್ಬಳೆ ಕುಳಿತಿದ್ದೀಯೆ? ಎನಲು ಅವಳು ಸನ್ನೆಯಲ್ಲೇ ಅಂದರೆ ಅಲ್ಲಿನ ಹಾಳು ಹಂಪೆಯೇ ತನ್ನ ಕಥೆಯನ್ನು ಹೇಳುವಂತೆ, ಕೇಳಣ್ಣ ನಾನೊಬ್ಬ ಹಳೆಯ ಮುತ್ತೈದೆ. ಇಲ್ಲಿ ಹಳೆಯ ಮುತ್ತೈದೆ ಎನ್ನುವ ಮಾತು ಸೂಕ್ತವಾಗಿದೆ. ಹಿಂದೆ ವಿಜಯನಗರ ಕಾಲದಲ್ಲಿ ವೈಭವಯುತವಾಗಿ ಮೆರೆದ ಹಂಪೆ ಇಂದು ತನ್ನ ಕಾಂತಿಯನ್ನು ಕಳೆದುಕೊಂಡಿದೆ ಎಂಬ ಅರ್ಥ ನೀಡುತ್ತದೆ. ಹಂಪೆಯನ್ನು ಒಂದು ಹೆಣ್ಣಿಗೆ ಹೋಲಿಸಿದ್ದಾರೆ. ಏಕೆಂದರೆ ಹೆಣ್ಣಿಗೆ ಈ ಸಮಾಜದಲ್ಲಿ ಹಲವಾರು ರೀತಿಯಲ್ಲಿ ತೊಂದರೆಯನ್ನು ಕೊಟ್ಟಿದ್ದಾರೆ, ಕೊಡುತ್ತಿದ್ದಾರೆ. ಅದಕ್ಕಾಗಿಯೇ ಹಂಪೆಯನ್ನು ಹಳೆ ಮುತ್ತೈದೆಗೆ ಹೋಲಿಸಿದ್ದಾರೆ. ಹಂಪೆ, ಇಂದು ಬಡವಾಗಿದ್ದೇನೆ, ನನಗೆ ಸಾವಿಲ್ಲ, ಆದರೆ ಸಾಯುತಿಹೆ ಎಂದು ಬಳಸಿರುವುದು ಸೂಕ್ತವಾಗಿದೆ. ನಾನಿಲ್ಲ ಎಂದರೆ ಹಂಪೆ ಎಂದು ನಾಶವಾಗಲಾರದು. ಆದರೆ ಅದು ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಆದ್ದರಿಂದ ನನ್ನನ್ನು ಮತ್ತೆ ಮುತ್ತೈದೆಯನ್ನಾಗಿ ಮಾಡಿ. ಹಿಂದೆ ಹಾಳಾದ ಹಲವು ಪ್ರದೇಶಗಳು ನನ್ನ ಅಕ್ಕತಂಗಿಯರು ಮತ್ತೆ ಚೆಲುವಾಗಿದ್ದಾರೆ. ಆದರೆ ಆ ಪುಣ್ಯ ನನಗಿಲ್ಲ ಎಂದು ಹಂಪೆಯು ವಿನಾಶದ ಅಂಚಿಗೆ ಬಂದಿದೆ. ಅದನ್ನು ಮತ್ತೆ ವೈಭವೀಕರಿಸಬೇಕು. ನಮ್ಮ ನಾಡನ್ನು ರಕ್ಷಿಸಬೇಕು ಎಂದು ಹೇಳುತ್ತಾರೆ ಶ್ರೀ.

ಮುಂದೆ ಕನ್ನಡನಾಡಿನ ಜನರನ್ನು ಕುರಿತು ನಾಡು ಚೆನ್ನಾಗಿದ್ದರೆ, ನಾಡಿನ ಜನತೆಯು ಸಂತೋಷವಾಗಿರುತ್ತಾರೆ ಎಂದು ಹೇಳುತ್ತ, ಚೆಲುವೆಯರ, ಚೆನ್ನಿಗರ, ತಾಯಿ ಮಕ್ಕಳರ, ಒಡಹುಟ್ಟಿದವರ ಇದುವರೆಗೂ ತಾಳ್ಮೆಯಿಂದ ಇದ್ದೀರ ಇನ್ನು ಮುಂದೆಯೂ ತಾಳಿ ಬಾಳುವೆ ಮಾಡಿ. ನಾಡು ನುಡಿ ನಡೆಗಳನ್ನು ಮುನ್ನಡೆಸುತ್ತ ಮುಂದೆ ಸಾಗಿ, ಭಾರತದ ಮಕ್ಕಳೆಲ್ಲ ಒಂದಾಗಿ ಒಕ್ಕೊರಲಾಗಿ ಕೂಗಿ ಈ ಹಿರಿಯ ಕೂಗನ್ನು

ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಗೆಲ್ಗೆ, ಬಾಳ್ಗೆ
ಕನ್ನಡದ ತಾಯ್ ಗೆಲ್ಗೆ, ಬಾಳ್ಗೆ

ಎಂಬುದಾಗಿ ಕನ್ನಡ ನಾಡಿನ ವೈಭವವನ್ನು ಶ್ರೀಯವರು ವಿವರಿಸುತ್ತಾ ಕನ್ನಡನಾಡು ಒಂದಾಗಿ ಒಗ್ಗಟ್ಟಿನಿಂದ ಅಖಂಡ ಕರ್ನಾಟಕವಾಗಬೇಕೆಂಬ ಹಂಬಲದಿಂದ ಜನತೆಗೆ ಎಚ್ಚೆತ್ತುಕೊಳ್ಳಲು ಈ ಮೂಲಕ ತಿಳಿಯಪಡಿಸಿದ್ದಾರೆ.

ಕರ್ನಾಟಕ ಏಕೀಕರಣಕ್ಕಾಗಿ ಬರಹವನ್ನು ಅಸ್ತ್ರಮಾಡಿಕೊಂಡ ಮತ್ತೊಬ್ಬ ಕವಿ ಹುಯಿಲಗೋಳ ನಾರಾಯಣರಾಯರು ಇವರು ಬರೆದ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಎಂಬ ಕವನದಲ್ಲಿ, ಕನ್ನಡನಾಡು ಎಂತಹ ನಾಡು, ಇಲ್ಲಿ ಎಂತಹ ಮಹಾನ್ ವ್ಯಕ್ತಿಗಳ ಜನನವಾಗಿದೆ. ಇದು ಕವಿಗಳ ನೆಲೆಬೀಡು ಎಂಬುದನ್ನು ವಿವರಿಸುತ್ತ ಉದಯವಾಗಲಿ ನಮ್ಮ ಚೆಲುವಿನ ಕನ್ನಡ ನಾಡು ಎಂಬುದನ್ನು ಹೇಳುತ್ತಾರೆ.

ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು
ಬದುಕು ಬಲುಹೀನ ನಿಧಿಯು ಸದಭಿಮಾನದ ಗೂಡು[೧]

ನಮ್ಮ ಕನ್ನಡನಾಡಿನ ಜನರ ಬದುಕು ತುಂಬ ಹೀನಸ್ಥಿತಿಯಲ್ಲಿದೆ. ಅನೇಕ ಕಷ್ಟಗಳನ್ನು ಅನುಭವಿಸುತ್ತ ಕರ್ನಾಟಕ ವಿವಿಧ ಜಾಗಗಳಿಗೆ ಹಂಚಿಹೋಗಿದೆ. ಆದರೆ ಕನ್ನಡಿಗರು ಅಭಿಮಾನ ಶೂರರು ನಾವು ನಮ್ಮವರು, ನಮ್ಮದು ಎಂಬ ಸದಭಿಮಾನ ಹೊಂದಿರುವವರು ಎಂದು ಹೇಳುತ್ತಾ,

ರಾಜರಿಗೆ ದ್ರೋಹ ಬಗೆಯುತ್ತಿದ್ದಂತಹವರಿಗೆ ಶತ್ರುವಾಗಿ ಕಾಡುತ್ತಿದ್ದ ಪರಶುರಾಮನು ಜನಿಸಿದ ನಾಡು, ಸಮುದ್ರವನ್ನೇ ಹಾರಿದ ಹನುಮನುದಿಸಿದ ನಾಡು ಧೈರ್ಯದಿಂದ ಸಾಹಸದಿಂದ ಮೆರೆದ ಅರಸುಗಳು ಆಳಿದ ನೆಲೆ, ವೀರರು ಜನಿಸಿದ ನಾಡು ಕನ್ನಡ ನಾಡು ಎಂದು ಹೇಳುತ್ತಾ ಕನ್ನಡದ ಕನ್ನಡಿಗರ ಶೌರ್ಯವನ್ನು ವರ್ಣಿಸುತ್ತಾರೆ.

ಮುಂದೆ ಕನ್ನಡ ನಾಡನ್ನು ವರ್ಣಿಸುತ್ತಾ ಅಮರಶಿಲ್ಪಿ ಜಕ್ಕಣ್ಣಚಾರ್ಯರು ಶಿಲ್ಪಕಲೆಯನ್ನು ಕೆತ್ತಿದ ಅಚ್ಚರಿಯ ನಾಡು ಮತಧರ್ಮಗಳನ್ನು ಸಾರಿದ, ಅವುಗಳು ಹುಟ್ಟಿ ಬೆಳೆಯಲು ಅವಕಾಶ ನೀಡಿದ ನಾಡು, ಎಷ್ಟು ತೆಗೆದರು ಮುಗಿಯದ ವಿದ್ವತ್ತಿನಿಂದ ಕೂಡಿದ ಪಂಡಿತರ ನಾಡು

---

೧. ಬಿ.ಎಂ.ಶ್ರೀ ಅವರ 'ಕನ್ನಡ ಬಾವುಟ', ಪುಟ. ೧೧೦.

ಪಾವನೆಯರಾ ಕೃಷ್ಣೆ ಭೀಮೆಯರ ತಾಯ್ನಾಡು
ಕಾವೇರಿ ಗೋದೆಯರು ಮೈದೊಳೆವ ನಲುನಾಡು[೧]

ಪಾವನೆಯರಾದ ಕೃಷ್ಣಾ ಮತ್ತು ಭೀಮಾನದಿ ಹುಟ್ಟಿದನಾಡು, ಕಾವೇರಿ, ಗೋದಾವರಿ ನದಿಯಿಂದ ಮೈತೊಳೆಯುವ ನಾಡು ಕನ್ನಡ ನಾಡು. ಎಂತಹವರನ್ನು ಪ್ರೇರೇಪಿಸುವ, ಸ್ಫೂರ್ತಿ ನೀಡುವ, ಕವಿಗಳು ಉದಿಸಿದ ನಾಡು ಹಾಗೆ ಕುಮಾರವ್ಯಾಸನು ಜನಿಸಿದ ಪುಣ್ಯಭೂಮಿ ಈ ನಾಡು ಎಂದು ವರ್ಣಿಸುತ್ತ ಕನ್ನಡನಾಡು ಎಂದರೆ ಏನು? ಎಂಬುದನ್ನು ನಮ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾ, ಇಂತಹ ಕನ್ನಡನಾಡು, ಕನ್ನಡಿಗರ ಹೋರಾಟದಿಂದ ಈಗ ಹಂಚಿಹೋಗಿರುವ ಕರ್ನಾಟಕ ಮತ್ತೆ ಏಕೀಕೃತಗೊಂಡು ನಮ್ಮ ಚೆಲುವಿನ ಕನ್ನಡ ನಾಡು ಉದಯವಾಗಲಿ ಎಂದು ಹಾರೈಸುತ್ತಾರೆ.

ಮುಂದೆ ಶಾಂತಕವಿಗಳು ಕರ್ನಾಟಕದ ಒಂದು ಕಲ್ಪನೆಯನ್ನು ಅವರ 'ರಕ್ಷಿಸು ಕರ್ಣಾಟಕ ದೇವಿ' ಎಂಬ ಕವನದಲ್ಲಿ ಹೀಗೆ ವ್ಯಕ್ತಪಡಿಸುತ್ತಾರೆ.

"ಕದಂಬಾದಿ ಸಂಪೂಜಿತ ಚರಣೆ
ಗಂಗಾರಾಧಿತ ಪದನಖ ಸರಣೆ
ಚಲುಕ್ಯರುತ್ತಮ ಕಾಂಚೀ ಕಿರಣೆ
ರಾಷ್ಟ್ರಕೂಟ ಮಣಿಕಂಠಾಭರಣೆ"[೨]

ಈ ಗೀತೆಯನ್ನು ಗಮನಿಸಿದಾಗ ಕನ್ನಡನಾಡು ಎಂದ ಕೂಡಲೇ, ಇಲ್ಲಿ ಕದಂಬರು, ಗಂಗರು, ಚಾಲುಕ್ಯರಂತಹ ಉತ್ತಮರು ಆಳ್ವಿಕೆ ಮಾಡಿದ ನಾಡು. ರಾಷ್ಟ್ರಕೂಟರು ಶ್ರೇಷ್ಠವಾಗಿ ಆಳ್ವಿಕೆ ಮಾಡಿದ ಭೂಮಿ ಕನ್ನಡ ನಾಡು.

ಮುಂದೆ ಹೇಳುತ್ತಾ ಕನ್ನಡನಾಡಿನಲ್ಲಿ ಮತಗಳು ಸ್ಥಾಪಿತವಾದವು. ಶಿಲ್ಪಕಲೆಗಳ ಬೀಡು, ಕವಿಜನ ಶ್ರೇಷ್ಠರು ಕೀರ್ತಿಸಿ ಹಾಡಿದ ನಾಡು, ಸಾಧು ಸಂತರು ಹುಟ್ಟಿದ ನಾಡು ಎಂಬುದಾಗಿ ಹೇಳುತ್ತಾ, ಕನ್ನಡ ನಾಡು ಶ್ರೇಷ್ಠವಾದ ನೆಲೆಬೀಡು ಎಂಬುದಾಗಿ ಅಭಿಪ್ರಾಯ ವ್ಯಕ್ತಪಡಿಸಿರುವುದನ್ನು ಕಾಣಬಹುದು.

ನವೋದಯ ಕಾಲದ ಮುಖ್ಯ ಕವಿಗಳಲ್ಲಿ ಮತ್ತೊಬ್ಬರಾದ 'ಗೋವಿಂದ ಪೈ' ರವರು ಹೇಳುವಂತೆ ಕನ್ನಡನಾಡಿನ ಬಸಿರಲಿ ಹುಟ್ಟಿದಂತವರು.

---

೧. ಬಿ.ಎಂ.ಶ್ರೀ ಅವರ 'ಕನ್ನಡ ಬಾವುಟ', ಪುಟ. ೧೧೦.

೨. ಅದೇ, ಪುಟ. ೧೦೫.

"ಜೈನರಾದ ಪೂಜ್ಯಪಾದ ಕೊಂಡಕುಂದವರ್ಯರ
ಮಧ್ವಯತಿಯೆ ಬಸವಪತಿಯೇ ಮುಖ್ಯಮತಾಚಾರ್ಯರ"[೧]

ಎಂದು ಹೇಳುತ್ತಾ ಈ ನಾಡಿನಲ್ಲಿ ಹಲವಾರು ಮತಾಚಾರ್ಯರು ಬಸವಣ್ಣನಂತ ವಚನಕಾರರು, ಶರ್ವ, ಪಂಪ, ರನ್ನ, ಲಕ್ಷ್ಮೀಪತಿ ಜನ್ನ, ಷಡಕ್ಷರಿ, ಮುದ್ಧಣ್ಣ, ಪುರಂದರದಾಸರು ಇಂತಹ ಮಹಾನ್ ಶ್ರೇಷ್ಠ ಕವಿವರೇಣ್ಯರು ಜನಿಸಿದ ಪುಣ್ಯಭೂಮಿ ಕರ್ನಾಟಕ ಎಂದು ಹೇಳುತ್ತಾರೆ.

ಮುಂದೆ ಕರ್ನಾಟಕದ ಹಿರಿಮೆ ತಿಳಿಸುತ್ತಾ

ಇಲ್ಲಿಲ್ಲದ ಶಿಲ್ಪಮಿಲ್ಲ;
ನಿನ್ನ ಕಲ್ಲೆ ನುಡಿವುದಲ್ಲ!
ಹಿಂಗತೆಯಿನಿವಾಲ ಸೊಲ್ಲ
ನೆಮ್ಮ ತೃಷೆಗೆ ದಕ್ಕಿಸು
ಹೊಸತು ಕಿನ್ನರಿಯಲ್ಲಿ ನಿನ್ನ ಹಳೆಯ ಹಾಡನುಕ್ಕಿಸು![೨]

ಬೇಲೂರು, ಹಳೆಬೀಡಿನಂತಹ ಶಿಲ್ಪಕಲಾ ಸೌಂದರ್ಯವನ್ನು ನೋಡಿದಾಗ ಇಲ್ಲಿಲ್ಲದ ಕಲೆ ಮತ್ತೆಲ್ಲಿಯೂ ಇಲ್ಲ. ಒಂದೊಂದು ಕಲ್ಲು ತನ್ನ ಸೌಂದರ್ಯವನ್ನು ಪ್ರದರ್ಶಿಸುತ್ತದೆ. ಇಂದಿನ ನವೀನ ಜಗತ್ತಿನಲ್ಲಿ ನಿನ್ನನ್ನು ಕಂಡಾಗ ಹಳೆಯ ವೈಭವವೆಲ್ಲವನ್ನು ಉಕ್ಕಿಸುತ್ತದೆ ಎಂದಿದ್ದಾರೆ.

ನಾಶದ ಅಂಚಿಗೆ ಸಿಲುಕಿದ್ದು ಇಷ್ಟೆಲ್ಲಾ ವೈಭವಯುತವಾದ ನಾಡು ಕೊನೆಗೆ ತಾಳಿಕೋಟೆ ಯುದ್ಧದಲ್ಲಿ ಅಷ್ಟೆಲ್ಲ ನಾಶವಾದರೂ ನಮ್ಮ ಕನ್ನಡನಾಡಿನ ಹೆಸರು ಎಲ್ಲಿಯೂ ಕುಗ್ಗಿಲ್ಲ ಎಂಬುದಾಗಿ ತಮ್ಮ "ಕನ್ನಡಿಗರ ತಾಯೆ" ಕವನದಲ್ಲಿ ಅಭಿವ್ಯಕ್ತಿಸಿದ್ದಾರೆ.

ಕನ್ನಡ ಕಾವ್ಯ ಲೋಕದ ದಿಗ್ಗಜರಲ್ಲಿ ಮತ್ತೊಂದು ಮಿನುಗುತಾರೆ 'ಕೆ.ಎಸ್.ನಿಸಾರ್ ಅಹಮದ್' ಇವರು ನಾಡಿಗೆ ಸಂಬಂಧಿಸಿದಂತೆ ಹಲವಾರು ಗೀತೆಗಳನ್ನು ರಚಿಸಿದ್ದಾರೆ. ಇವರು ನವೋದಯ ಕಾಲದಿಂದ ಹಿಡಿದು ಇತ್ತೀಚಿನವರೆಗೂ ಕೂಡ ಸಾಹಿತ್ಯದ ಕೃಷಿಯನ್ನು ಮಾಡಿದ್ದಾರೆ. ಅವರೇ ಹೇಳಿಕೊಳ್ಳುವಂತೆ "ನಾನು ನವೋದಯ ಕಾಲದ ಕವಿ" ಎಂಬುದಾಗಿ ಹೇಳಿಕೊಳ್ಳುತ್ತಾರೆ. ಅವರ ಮುಖ್ಯ

---

೧. ಬಿ.ಎಂ.ಶ್ರೀ ಅವರ 'ಕನ್ನಡ ಬಾವುಟ', ಪುಟ. ೧೦೬.

೨. ಅದೇ, ಪುಟ. ೧೦೭.

ಕವನಗಳಲ್ಲಿ ಒಂದಾದ 'ಜೋಗದ ಸಿರಿ ಬೆಳಕಿನಲ್ಲಿ' ಕವನದಲ್ಲಿ ಕನ್ನಡ ನಾಡನ್ನು ಈ ರೀತಿ ಕಟ್ಟಿಕೊಡುತ್ತಾರೆ.

"ಜೋಗದ ಸಿರಿಬೆಳಕಿನಲ್ಲಿ, ತುಂಗೆಯ ತೆನೆ ಬಳುಕಿನಲಿ
ಸಹ್ಯಾದ್ರಿಯ ಲೋಹದದಿರ ಉತ್ತುಂಗದ ನಿಲುಕಿನಲ್ಲಿ
ನಿತ್ಯಹರಿದ್ವರ್ಣವನದ ತೇಗ ಗಂಧ ತರುಗಳಲ್ಲಿ
ನಿತ್ಯೋತ್ಸವ ತಾಯಿ ನಿತ್ಯೋತ್ಸವ"[೧]

ಎಂಬುದಾಗಿ ಹೇಳುತ್ತಾ ಕನ್ನಡ ನಾಡು ಎಂದ ಕೂಡಲೇ ಜೋಗ ಜಲಪಾತ, ತುಂಗಾನದಿ, ಸಹ್ಯಾದ್ರಿ ಬೆಟ್ಟಗಳ ಸಾಲು, ನಿತ್ಯಹರಿದ್ವರ್ಣ ಕಾಡುಗಳು, ತೇಗ, ಗಂಧಗಳ ಬೆಳೆಯುವ ನಾಡು ಎಂಬುದಾಗಿ ವರ್ಣಿಸುತ್ತಾರೆ.

ನಮ್ಮ ಇತಿಹಾಸ, ಹಿಂದಿನ ಸಾಹಸಗಳನ್ನು ನಮ್ಮ ಶಾಸನಗಳು ಸಾರುತ್ತವೆ. ಓಲೆಗರಿಗಳು ಹೇಳುತ್ತವೆ. ದೇಗುಲಗಳು ನಮ್ಮ ಇತಿಹಾಸದ ಚಿತ್ರಗಳನ್ನು ಬಿಂಬಿಸುತ್ತವೆ. ನಮ್ಮಲ್ಲಿ ಭೇದಭಾವವಿಲ್ಲ ಎನ್ನುವ ಗರಿಮೆಯಿದೆ, ನಿರ್ಮತ್ಸರದ ಮನಸ್ಸುಗಳಿವೆ ಎಂಬುದಾಗಿ ವರ್ಣಿಸಿರುವುದನ್ನು ಅವರ ಕವನದಲ್ಲಿ ಗಮನಿಸಬಹುದು.

'ಕೆ.ಎಸ್.ನಿಸಾರ್ ಅಹಮದ್'ರವರ ಮತ್ತೊಂದು ಕವನವಾದ 'ಎಲ್ಲಿ ಎಲ್ಲಿ ರಮ್ಯ ತಾಣ' ಕವನವನ್ನು ಗಮನಿಸಿದಾಗ ಅಲ್ಲಿಯು ಕೂಡ ಕನ್ನಡ ನಾಡಿನ ಕಲ್ಪನೆಯನ್ನು ತಂದುಕೊಟ್ಟಿರುವುದನ್ನು ಗಮನಿಸಬಹುದು.

"ತುಂಗೆ ಕೃಷ್ಣೆ ಕಾವೇರಿ ನಿನ್ನ ಪ್ರಾಣ ಸ್ಪಂದನ
ಹರಿದ್ವರ್ಣ ತರುಸುಪರ್ಣ ವಿಪಿನ ಸ್ವಪ್ನನಂದನ
ಪಶ್ಚಿಮಾದ್ರಿ ದರಿ ತಟಾಕ ಘಟ್ಟ ನಾಕ ಸದೃಶ
ಬಯಲು ಸೀಮೆ ತೆನೆ ಸುಭಿಕ್ಷ, ಕಲ್ಪವೃಕ್ಷ ಪರವಶ"[೨]

ತುಂಗಾ, ಕೃಷ್ಣ, ಕಾವೇರಿ ನದಿಗಳು ಹರಿದಾಡುವ ಪುಣ್ಯತಾಣವಿದು, ಹರಿದ್ವರ್ಣ ಕಾಡುಗಳಿರುವ ನಂದನವನ, ಪಶ್ಚಿಮ ಘಟ್ಟಗಳ ಸಾಲಿರುವ ಸ್ವರ್ಗ ಸದೃಶವಾದ ನಾಡು ಬಯಲು ಸೀಮೆಗಳಲ್ಲಿ ಭತ್ತ, ರಾಗಿ ತೆನೆಗಳನ್ನು ಬೆಳೆಯುವ ಕಲ್ಪವೃಕ್ಷದ ನಾಡು ಎಂಬುದಾಗಿ ಹೇಳುತ್ತಾ ನಮ್ಮ ನಾಡು ಗುಡಿ, ಚರ್ಚು, ಮಸೀದಿಗಳಿರುವ ಹೆಗ್ಗಳಿಕೆಯ ನಾಡು. ಅಂದರೆ ಇಲ್ಲಿ ಭೇದ ಭಾವವಿಲ್ಲದೆ ಎಲ್ಲಾ ಧರ್ಮದವರು ನೆಲಸಿರುವ ನಾಡು

೧. ಮಂಜುನಾಥ್.ಕೆ,ರವರ ನಾಡಗೀತೆಗಳು, ಪುಟ. ೪೦.
೨. ಅದೇ., ಪುಟ. ೪೦.

ಇಲ್ಲಿ ನೆಲಸಿದ್ದ ಸಂತರು, ಫಕೀರರು, ಜಿನರು ಎಲ್ಲರಿಗೂ ನಮೋ ನಮೋ ಎಂದು ಹೇಳುತ್ತಾರೆ.

ಸುಸಂಸ್ಕಾರ ತುಂಬಿರುವ ನಾಡು ಕನ್ನಡನಾಡು. ವಿವಿಧ ಮತ, ಜಾತಿಯ ಜನರಿದ್ದರು ನಾವೆಲ್ಲರೂ ಒಂದೇ ಎಂಬ ಐಕ್ಯತೆಹೊಂದಿರುವ ನಾಡು ಎಂಬುದಾಗಿ ಕನ್ನಡನಾಡಿನ ವರ್ಣನೆ ಮಾಡಿದ್ದಾರೆ.

ನವೋದಯ ಕಾಲದ ಮತ್ತೋರ್ವ ಶ್ರೇಷ್ಠ ಕವಿ 'ಜಿ.ಎಸ್.ಶಿವರುದ್ರಪ್ಪ' ನವರು ಅಂದಿನ ಕನ್ನಡ ನಾಡನ್ನು ಕಂಡು ಅಲ್ಲಿ ಹೊಸತನ ಮತ್ತೆ ಕಾಣಬೇಕು ಎಂಬ ಹಿನ್ನೆಲೆಯಲ್ಲಿ ಅವರ "ಶುಭೋದಯ" ಕವನವನ್ನು ಗಮನಿಸಬಹುದು. ಅವರು ಕನ್ನಡ ನೆಲದ ಮೇಲೆ ನವೋದಯದ ಅಂದರೆ ಇಲ್ಲಿ ಹೊಸ ಎಂಬ ಅರ್ಥವನ್ನು ತೆಗೆದುಕೊಂಡು ಕನ್ನಡದ ನೆಲದ ಮೇಲೆ ಅದು ಹೇಗೆ ತನ್ನ ಬೆಳಕನ್ನು ಚೆಲ್ಲಬೇಕು ಎಂಬುದಾಗಿ ವಿವರಿಸಿದ್ದಾರೆ.

ನವೋದಯದ ಕಿರಣಲೀಲೆ
ಕನ್ನಡದೀ ನೆಲದ ಮೇಲೆ
ಶುಭೋದಯವ ತೆರೆದಿದೆ[೧]

ಇಲ್ಲಿ 'ನವೋದಯದ ಕಿರಣಲೀಲೆ' ಅಂದ ಕೂಡಲೆ ನಾವು ಗಮನಿಸಬೇಕಾದದ್ದು ಹೊಸತನ, ಹಳೆಯ ಕಂದಾಚಾರಗಳು, ಮೂಢನಂಬಿಕೆಗಳು, ಎಲ್ಲವೂ ಕಳೆದು ನವೋದಯದ ಕಿರಣವು ಕನ್ನಡದ ನೆಲದ ಮೇಲೆ ಪ್ರಭಾವ ಬೀರಿದೆ. ಶುಭೋದಯವ ತೆರೆದಿದೆ. 'ಶುಭ ಎಂದರೆ ಮಂಗಳ' ಅಂದರೆ ಕನ್ನಡದ ನೆಲದ ಮೇಲೆ ಎಲ್ಲವೂ ಮಂಗಳಕರವಾಗಿದೆ.

ನದಿಗಳಲ್ಲಿ, ಗಿರಿವನಗಳಲ್ಲಿ, ಶಿಲ್ಪಕಲೆ, ಗಾನ, ಕಾವ್ಯ, ಗುಡಿಗೋಪುರದ ಶಿಖರಗಳಲ್ಲಿ ಎಲ್ಲವೂ ಮಂಗಳಕರವಾಗಲಿದೆ. ಇತ್ತೀಚಿನ ದಿನಗಳಲ್ಲಿ ಜಾನಪದ ಎಂಬುದೇ ಹೋಗಿ ಈ ದೊಂಬಿ ನಗರಗಳಲ್ಲಿ ಎಲ್ಲವೂ ಆಧುನಿಕವಾಗಲಿದೆ. ಯಂತ್ರೋಪಕರಣಗಳಿಂದ ಜನರಿಗೆ ಎಲ್ಲಾ ಕೆಲಸವು ಸುಗಮವಾಗಲಿದೆ, ಒಂದು ರೀತಿಯ ಚಕ್ರಗತಿಯಲ್ಲಿ ಪ್ರಗತಿಯಾಗುತ್ತಿದೆ. ಇಲ್ಲಿ 'ಚಕ್ರ' ಅಂದ ಕೂಡಲೆ ಅದು ಉರುಳುವ ಒಂದು ಸಾಧನ ಅಂದರೆ ಮೇಲಿದ್ದವರು ಕೆಳಗೆ ಬರಬೇಕು, ಕೆಳಗಿದ್ದವರು

---

೧. ಮಂಜುನಾಥ್.ಕೆ,ರವರ ನಾಡಗೀತೆಗಳು, ಪುಟ. ೪೮.

ಮೇಲೆ ಹೋಗಬೇಕು ಅಂದರೆ ಹೊಸದು ಬಂದಾಗ ಹಳೆಯದು ಹೋಗುತ್ತದೆ ಎಂಬ ಅರ್ಥದಲ್ಲಿ ಬಳಸಲಾಗಿದೆ.

ಹಿಂದಿನಕಾಲದವರಾಗಬಹುದು ಅಥವಾ ಈಗಿನ ಕಾಲದವರಗಬಹುದು, ಹಿರಿಯರಾಗಲಿ, ಕಿರಿಯರಾಗಲಿ ಹೊಸತನದ ಉತ್ಸಾಹ ಎಲ್ಲಾ ಕಡೆ ಚಿಮ್ಮುತ್ತಿದೆ. ಇದರಿಂದ ಎಲ್ಲರೂ ಎಚ್ಚೆತ್ತು ಕನ್ನಡ ನಾಡಿಗೆ ಎಲ್ಲವೂ ಶುಭವಾಗಲಿದೆ ಎಂಬುದಾಗಿ ಕವಿ ಜಿ.ಎಸ್.ಎಸ್.ರವರು ಆಶಯ ವ್ಯಕ್ತಪಡಿಸಿದ್ದಾರೆ.

ನವೋದಯ ಸಾಹಿತ್ಯದ ಮತ್ತೊಬ್ಬ ಮೇರು ಕವಿ, ಶಬ್ದ ಗಾರುಡಿಗ ಎಂದೇ ಖ್ಯಾತಿ ಗಳಿಸಿರುವ ದ.ರಾ.ಬೇಂದ್ರೆಯವರು ಕೂಡ ಕನ್ನಡ ನಾಡು ಮತ್ತು ನುಡಿಯ ಬಗ್ಗೆ ಅಪಾರ ಗೌರವ ಪ್ರೀತಿ ಉಳ್ಳಂತಹ ಲೇಖಕರು. ಅವರು ಕನ್ನಡ ನಾಡಿನ ಶ್ರೇಷ್ಟತೆ ಎಂತದ್ದು. ಕರ್ನಾಟಕದಲ್ಲಿರುವವರೇ ನಿಜಕ್ಕೂ ಧನ್ಯ, ಮಾನ್ಯ ಎಂಬುದನ್ನು ಅವರ 'ಒಂದೇ ಕರ್ನಾಟಕ' ಕವನವನ್ನು ಗಮನಿಸಿದಾಗ ತಿಳಿದುಬರುತ್ತದೆ. ಕರ್ನಾಟಕ ಎಂದರೆ ಎಂತಹ ನಾಡು ಅಲ್ಲಿ ಹುಟ್ಟಿದವರೇ ಶ್ರೇಷ್ಠರು ಎಂದು ಹೇಳುತ್ತಾ 'ಅದನ್ನು ಯಾರು ಗೌರವಿಸುವುದಿಲ್ಲವೋ ಅವನು ಇದ್ದರೂ ಒಂದೇ, ಸತ್ತರೂ ಒಂದೇ' ಎಂಬುದಾಗಿ ಈ ಕವನದಲ್ಲಿ ಪ್ರಸ್ತುತಪಡಿಸಿದ್ದಾರೆ.

"ಒಂದೇ ಒಂದೇ ಒಂದೇ ಕರ್ನಾಟಕ ಒಂದೆ
ಇಂದೇ ಮುಂದೆ ಎಂದೇ ಕರ್ನಾಟಕ ಒಂದೇ"[೧]

ಕರ್ನಾಟಕ ಒಂದೇ ಶ್ರೇಷ್ಠ. ಎಷ್ಟೇ ಶತಮಾನಗಳ ಹಿಂದಕ್ಕೆ ಹೋದರು ಅಥವಾ ಮುಂದಿನ ಶತಮಾನಗಳಲ್ಲಿಯೂ ಕೂಡ ಶ್ರೇಷ್ಠವಾದುದು ನಮ್ಮ ಕರ್ನಾಟಕ. ಜಗತ್ತಿನ ಏಳಿಗೆಯಾಗಬೇಕಾದರೆ ಅದು ಕರ್ನಾಟಕದಿಂದ ಮಾತ್ರ ಸಾಧ್ಯ. ಇಲ್ಲಿನ ಜನರ ಮನಸ್ಸು ಭಾವನೆ ಎಲ್ಲವೂ ಒಂದೇ ನಾವೆಲ್ಲರೂ ಕನ್ನಡಿಗರು ಎಂಬ ಭಾವನೆಯಿದೆ. ನಮ್ಮ ಕುಲ, ನಾವಿರುವ ಜಾಗ, ನಮ್ಮ ನೀತಿ ಎಲ್ಲವೂ ಒಂದೇ ಎಂದು ಯಾರು ಹೇಳುವುದಿಲ್ಲವೋ ಅವರು ಇದ್ದರೂ ಒಂದೇ ಇರದಿದ್ದರೂ ಒಂದೇ. ಕರ್ನಾಟಕವನ್ನು ಯಾರು ನಿಂದಿಸುತ್ತಾರೋ ಅವರನ್ನು ಕರ್ನಾಟಕದವರು ಯಾರು ತಡೆದುಕೊಳ್ಳುವುದಿಲ್ಲ ಎಂಬುದಾಗಿ ಕನ್ನಡಿಗರ ಅಭಿಮಾನವನ್ನು ಹೊಗಳಿದ್ದಾರೆ. ಕನ್ನಡಿಗರಲ್ಲಿ ನಮ್ಮದು ನಿಮ್ಮದು ಎಂಬ ಆಸ್ತಿಪಾಸ್ತಿಯ ಭೇದವಿಲ್ಲದೆ ಎಲ್ಲವೂ ಕನ್ನಡ ತಾಯಿಗೆ ಸೇರಿದೆ. ಕೆಲಸದಲ್ಲಿಯೂ ಕೂಡ ಇದು ಕಮ್ಮಿ ಜಾಸ್ತಿ ಎಂದು ಯಾರು ಅಂದುಕೊಳ್ಳುತ್ತಾರೋ

---

೧. ಮಂಜುನಾಥ್.ಕೆ,ರವರ ನಾಡಗೀತೆಗಳು, ಪುಟ. ೫೨.

ಅಂತವನು ಇದ್ದರೂ ಒಂದೇ ಇರದಿದ್ದರೂ ಒಂದೇ, ಇಂತಹ ಭಾವನೆ ಯಾರಲ್ಲಿ ಇರುವುದಿಲ್ಲವೋ ಅವನು ಶೂದ್ರನಿಗೆ ಸಮಾನ ಎಂಬುದಾಗಿ ಹೇಳುತ್ತಾರೆ. ಇಂತಹದನ್ನು ಗಮನಿಸಿದಾಗ ಬೇಂದ್ರೆಯವರು ಎಂತಹ ಕನಸನ್ನು ಕಟ್ಟಿಕೊಂಡಿದ್ದರು. ಆದರೆ ಈಗ ನಾವು ಗಮನಿಸಿದರೆ ನಮ್ಮ ನಡುವೆ ಕೆಲವು ಸ್ವಾರ್ಥಿಗಳು ಕೂಡ ಇದ್ದಾರೆ.

ನವೋದಯ ಕಾಲದ ಮತ್ತೊಬ್ಬ ಲೇಖಕರು ಹಾಗೂ ಕರ್ನಾಟಕ ಏಕೀಕರಣದಲ್ಲಿ ಸ್ವತಃ ಸ್ವಾನುಭವ ಪಡೆದ 'ಕಯ್ಯಾರ ಕಿಞ್ಞಣ್ಣ ರೈ' ರವರು ಕರ್ನಾಟಕ ಏಕೀಕರಣವಾದಾಗ, ಅವರ ಹುಟ್ಟೂರಾದ ಕನ್ನಡ ಪ್ರದೇಶ ಕಾಸರಗೋಡನ್ನು ಕೇರಳಕ್ಕೆ ಸೇರಿಸಿದಾಗ, ಅವರು 'ಬೆಂಕಿ ಬಿದ್ದಿದೆ ಮನೆಗೆ' ಎಂಬ ಒಂದು ದೀರ್ಘ ಕವನವನ್ನು ಬರೆದಿದ್ದಾರೆ. ಹಾಗೆ ಸೇರಿಸಿದ ವರ್ಷವೇ "ಧಾರವಾಡದಲ್ಲಿ ರಾಷ್ಟ್ರಕವಿ ಕುವೆಂಪು ಅವರ ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ ಜರುಗಿದಾಗ ಕವಿಗೋಷ್ಠಿಯಲ್ಲಿ ಈ ಪದ್ಯವನ್ನು ಭಾವಪೂರ್ಣವಾಗಿ ಓದಿದ್ದೇನೆ ಎಂಬುದಾಗಿ ಸ್ವತಃ ಕಿಞ್ಞಣ್ಣ ರೈ ಅವರೇ ಹೇಳಿಕೊಂಡಿದ್ದಾರೆ". ಆ ಕವಿತಾ ವಾಚನ ಮುಗಿದ ಕೂಡಲೇ ಬಸವರಾಜು ಕಟ್ಟೀಮನಿಯವರು ಎದ್ದು ನಿಂತು, ರೈಗಳೆ, ನಾವು ಬರುತ್ತೇವೆ, ಅನ್ಯಾಯವಾಗಿ ಕೇರಳಕ್ಕೆ ಸೇರಿಸಿದ ಕಾಸರಗೋಡನ್ನು ಮರಳಿ ಕರ್ನಾಟಕಕ್ಕೆ ಸೇರಿಸುತ್ತೇವೆ" ಎಂದು ಹೇಳಿ ಸಭೆಯಲ್ಲಿ ಪ್ರಚಂಡ ಕರತಾಡನವಾಯಿತು ಎಂದು ಹೇಳಿಕೊಂಡಿದ್ದಾರೆ.

"ಬೆಂಕಿ ಬಿದ್ದಿದೆ ಮನೆಗೆ ಓ ಬೇಗನೆ ಬನ್ನಿ
ಎಲ್ಲರೂ ಎದ್ದೆದ್ದೂ ಓಡಿ ಬನ್ನಿ!"[೧]

ಎಂದು ತಮ್ಮ ನೋವನ್ನು ತೋಡಿಕೊಳ್ಳುತ್ತ ಕನ್ನಡದ ಗಡಿ ಛಿದ್ರವಾಗುತ್ತಿದೆ. ಆದ್ದರಿಂದ ನಮ್ಮ ಗಡಿಯನ್ನು ಹೋರಾಟಮಾಡಿ ಕಾಪಾಡಿಕೊಳ್ಳೋಣ, ಗುಡಿಕಾಯೋಣ, ನಮ್ಮ ನುಡಿಯನ್ನು ಉಳಿಸಿಕೊಳ್ಳೋಣ. ಹಾಗಾಗದಿದ್ದರೆ ನಾವು ಸಾಯೋಣ ಅಂದರೆ ಕನ್ನಡ ನಾಡಿಗಾಗಿ ಮಾಡು ಇಲ್ಲವೆ ಮಡಿಯಿರೆನ್ನುತ ಹೋರಾಟ ಮಾಡೋಣ ಎಂದು ಕರೆ ನೀಡಿದ್ದಾರೆ.

ಕನ್ನಡ ನಾಡಿನ ಎಲ್ಲಾ ಜನರು ತಮ್ಮ ತಮ್ಮ ಮನೆಯೊಳಗೆ ತಮ್ಮ ಕ್ಷೇಮವನ್ನು ಮಾತ್ರ ನೋಡಿಕೊಳ್ಳದೆ ನಾಡಿಗಾಗಿ ಹೋರಾಟ ಮಾಡಿ ಬನ್ನಿ ಅಣ್ಣತಮ್ಮಂದಿರೆ, ಅಕ್ಕತಂಗಿಯರೆ, ನಮ್ಮ ನಾಡಿಗೆ ಬಂದಿರುವ ನೋವನ್ನು ನಿವಾರಿಸಿ ಎಂದು ಹೇಳುತ್ತಾ

---

೧. ಮಂಜುನಾಥ್.ಕೆ,ರವರ ನಾಡಗೀತೆಗಳು, ಪುಟ. ೭೩.

ನಮ್ಮ ಕನ್ನಡಿಗರೆಲ್ಲರ ಛಲ, ಬಲವನ್ನು ಒಗ್ಗೂಡಿಸಿಕೊಂಡು ನಮ್ಮ ನೆಲ ಒಂದೇ ಅದು ಕನ್ನಡನಾಡು ಎಂದು ಕರ್ನಾಟಕ ಏಕೀಕರಣಕ್ಕೆ ದುಡಿಯೋಣ ಬನ್ನಿ ಕನ್ನಡದ ಕುಲಕೋಟಿ ಜನರೇ ಎಚ್ಚರವಿರಲಿ, ಬೇರೆಯವರಿಗೆ ಹೆದರಿಕೊಳ್ಳದೆ ನೀವು ಸಿಂಹಸ್ವಪ್ನವಾಗಿ ನಿಂತು, ಅನ್ಯಾಯಕ್ಕೆ ಅವಕಾಶ ಮಾಡಿಕೊಡದೆ, ಒಂದು ಅಂಗುಲ ಜಾಗವನ್ನು ಕರ್ನಾಟಕದಿಂದ ಬೇರೆಯವರಿಗೆ ಬಿಟ್ಟುಕೊಡಬೇಡಿ, ನಿಮ್ಮ ನಿಮ್ಮ ಪ್ರಾಣವನ್ನು ಪಣಕಿಟ್ಟು, ಧೀರ ಧೀಕ್ಷೆಯನ್ನು ತೊಟ್ಟು ಭುವನೇಶ್ವರಿಯನ್ನು ಸ್ಮರಿಸುತ್ತ ಕರ್ನಾಟಕ ಏಕೀಕರಣಕ್ಕಾಗಿ ದುಡಿಯಿರಿ ಎಂದು ಹೇಳುತ್ತಾ

> "ಏಳ್ಗೆ ಕರ್ಣಾಟಕಂ
> ಬಾಳ್ಗೆ ಕರ್ಣಾಟಕಂ
> ಆಳ್ಗೆ ಕರ್ಣಾಟಕಂ
> ಜಗದೀಶ್ವರಿ"[೧]

ಕನ್ನಡ ನಾಡಿಗಾಗಿ ಹೋರಾಡಿ ಎಂದು ಕರೆ ನೀಡಿದ್ದಾರೆ. ಇಲ್ಲಿ ನಾವು ಕರ್ನಾಟಕದ ಏಕೀಕರಣಕ್ಕಾಗಿ ಹೇಗೆ ಹೋರಾಟ ಮಾಡಿದ್ದಾರೆ. ನವೋದಯ ಕವಿಗಳು ಹೇಗೆ ಜನರನ್ನು ಪ್ರೇರೇಪಿಸಿದ್ದಾರೆ ಎಂಬುದನ್ನು ಈ ಕವನದ ಮೂಲಕ ಅರ್ಥೈಸಬಹುದಾಗಿದೆ.

ಕನ್ನಡನಾಡು ನಮ್ಮ ನಾಡು, ಅದಕ್ಕಾಗಿ ಅದರ ರಕ್ಷಣೆಗಾಗಿ ದೀಕ್ಷೆಯನ್ನು ತೊಡು, ಕಂಕಣವನ್ನು ಕಟ್ಟಿ ಕನ್ನಡ ನಾಡಿಗಾಗಿ ಹೋರಾಡಲು ಸಿದ್ದನಾಗು. ಇನ್ನು ಕನ್ನಡ ನಾಡಿನಲ್ಲಿರುವ ನಾವೆಲ್ಲರೂ ಒಂದೇ ಎಂಬುದಾಗಿ ಪ್ರಮಾಣಿಸು. ಅದಕ್ಕೆ ನೃಪತುಂಗ, ಪಂಪ, ಕೂಡಲಸಂಗಮ, ಗದುಗಿನ ವೀರನಾರಾಯಣನೇ ಸಾಕ್ಷಿ ಎಂದು ಹೇಳುತ್ತಾ

> "ಇದು ಸಹ್ಯಾದ್ರಿಯ ಮೇಲಾಣೆ
> ಇದು ಕಾವೇರಿಯ ಮೇಲಾಣೆ
> ಇದು ಚಾಮುಂಡಿಯ ಮೇಲಾಣೆ
> ಇದು ಗೊಮ್ಮಟ ಗುರುದೇವನಾಣೆ"[೨]

---

೧. ಮಂಜುನಾಥ್.ಕೆ,ರವರ ನಾಡಗೀತೆಗಳು, ಪುಟ. ೭೪.

೨. ಅದೇ, ಪುಟ. ೭೮.

ಈ ಕವನವನ್ನು ಗಮನಿಸಿದಾಗ ಕರ್ನಾಟಕದ ಚಿತ್ರಣ ಕಣ್ಣಿಗೆ ಬರುತ್ತದೆ. ಸಹ್ಯಾದ್ರಿ ಬೆಟ್ಟ, ಕಾವೇರಿ ನದಿ, ಚಾಮುಂಡಿಬೆಟ್ಟ, ಗೊಮ್ಮಟೇಶ್ವರ ಈ ಎಲ್ಲವೂ ಕರ್ನಾಟಕವನ್ನು ಕಟ್ಟಿಕೊಡುತ್ತವೆ. ನಮ್ಮ ವೈಭವವನ್ನು ನೆನಪಿಗೆ ತರುತ್ತದೆ. ಹಾಗಾಗಿ ರವಿ, ಚಂದ್ರರ, ಸರ್ವದೇವರ ಸಾಕ್ಷಿಯಾಗಿ, ನಿನ್ನ ಸತಿ, ನಿನ್ನ ಪತಿ, ಮಕ್ಕಳ ಮೇಲಿನ ಪ್ರೀತಿಯ; ಗುರುದೇವರ ಆಣೆಯಾಗಿ ಕರ್ನಾಟಕದ ರಕ್ಷಣೆಗಾಗಿ ಧೀಕ್ಷೆಯನ್ನು ಕಂಕಣವನ್ನು ತೊಡು ಎಂಬುದಾಗಿ ಕರೆ ನೀಡಿದ್ದಾರೆ.

ಕನ್ನಡ ನಾಡು ವಿಭಾಗವಾಗುತ್ತಿದ್ದ ಸಂದರ್ಭದಲ್ಲಿ ಜಿ.ಕೆ.ಪ್ರಾಣೇಶಾಚಾರ್‌ರವರು ನಮ್ಮ ನಾಡಿಗೆ ಬನ್ನಿ ನಿಮ್ಮವರನ್ನು ನೋಡಿ ಪ್ರೀತಿಯಿಂದ ಮಾತಾಡಿ

"ತುಂಗನಾಳಿದ ತಿರುಳುಗನ್ನಡದ ನಾಡು
ದಾಸರಿಂ ಪಾವನತೆಹೊಂದಿದೀ ನಾಡು
ಇಕ್ಕೆಲ್ಲದ ಸೆಳತಕ್ಕೆ ಸೀಳಾಗಿ ಪಾಡು
ವಿಂಗಡಿಸಿ ಹೀಗಾಗಿ ಹೋಗಿಹುದು ನೋಡು"[೧]

ಹಾಗಾಗಿ ಕನ್ನಡ ನಾಡು ವಿಭಾಗವಾಗಿ ಏಕೀಕೃತ ಕರ್ನಾಟಕ ನಮಗೆ ದೊರೆತಿಲ್ಲ. ಆದರೆ ಅದರಿಂದ ಅಳುತ್ತಾ ಕುಳಿತಿದ್ದರೆ ಏನು ಪ್ರಯೋಜನವಿಲ್ಲ. ಕನ್ನಡನಾಡಿನ ಜನಕೆ ತಿಳುವಳಿಕೆ ಮೂಡಿದೆ ಅದು ಸಾಕು. ಈಗ ಬಂದಿರುವ ತಿಳುವಳಿಕೆಯಿಂದ ಅದು ಬತ್ತಿಹೋಗುವ ಮುನ್ನಾ ಜನರನ್ನು ಒಗ್ಗಟ್ಟಿನಿಂದ ಕೂಡಿಸಿ ಮತ್ತೆ ಕನ್ನಡನಾಡನ್ನು ಏಕೀಕರಣಗೊಳಿಸಿ, ನಮ್ಮ ಮನಕ್ಕೆ, ಕನ್ನಡ ತಾಯಿಯ ಎದೆಗೆ ತಂಪನ್ನು ನೀಡಿ ಎಂದು ಕರೆ ನೀಡುತ್ತಾ ಕನ್ನಡನಾಡಿನ ಜನರನ್ನು ಎಚ್ಚರಿಸಿದ್ದಾರೆ.

ಇಷ್ಟೆಲ್ಲಾ ಹೋರಾಟ, ಕಷ್ಟ, ನಷ್ಟಗಳ ನಡುವೆ ಕರ್ನಾಟಕ ಏಕೀಕರಣಗೊಂಡು ನವೆಂಬರ್ ೧, ೧೯೫೬ ಕರ್ನಾಟಕ ರಾಜ್ಯೋತ್ಸವವನ್ನು ಆಚರಿಸಲಾಯಿತು. ಕೆ.ಎಸ್.ನರಸಿಂಹಸ್ವಾಮಿಯವರು ಪ್ರೇಮಕವಿ ಎಂದು ಪ್ರಖ್ಯಾತಿಯಾಗಿದ್ದರು. ಏಕೀಕರಣದ ಸಂದರ್ಭ ಎಂತವರನ್ನು ಆಕರ್ಷಿಸಿ ನಾಡು ಮತ್ತು ನಾಡಿನ ಪ್ರಜ್ಞೆಯನ್ನು ಮೂಡಿಸಿದೆ ಎಂಬುದಕ್ಕೆ ಇವರೇ ಸಾಕ್ಷಿ. ಅವರ "ಕರ್ನಾಟಕ ರಾಜ್ಯೋತ್ಸವ" ಕವನದಲ್ಲಿ ಹೀಗೆ ತಮ್ಮ ಸಂತೋಷ ವ್ಯಕ್ತಪಡಿಸಿದ್ದಾರೆ.

---

೧. ಮಂಜುನಾಥ್.ಕೆ,ರವರ ನಾಡಗೀತೆಗಳು, ಪುಟ. ೮೦.

"ಬಹುಕಾಲದಿಂದ ಎದೆಯಲ್ಲಿ ಕುದಿದ
ಕನ್ನಡಿಗರಾಸೆ ಫಲಿಸಿ
ಒಂದಾದ ನಾಡು ಅಣಿಯಾದ ಹೆಸರ
ಮಣಿ ಪದಕವನ್ನು ಧರಿಸಿ"

ಬಹುಕಾಲದಿಂದಲೂ ಕರ್ನಾಟಕ ಏಕೀಕರಣವಾಗಬೇಕೆಂಬ ಕನ್ನಡಿಗರ ಆಸೆ ಇಂದು ಫಲಿತವಾಗಿದೆ. ಕನ್ನಡಿಗರ ಬದುಕು ತಲೆಯೆತ್ತ ಹಿನ್ನೆಲೆಯಲ್ಲಿ ಇಂದು ಮನೆಮನೆಯ ಮುಂದೆ 'ರಂಗೋಲಿ' ಮೂಡಿದೆ. ಇಲ್ಲಿ ರಂಗೋಲಿ ಎನ್ನುವುದು ಕನ್ನಡಿಗರ ಮನಸ್ಸಿನಲ್ಲಿ ಹೊಸ ಚೇತನದ ಉತ್ಸಾಹ ಮೂಡಿದೆ.

ನಮ್ಮ ನಾಡು ಹುಲಿ, ಜಿಂಕೆ, ಹೆಬ್ಬಾವು, ಓಡಾಡುವಂತಹ ಎತ್ತರದ ಹಸಿರು ನಾಡು, ನದಿ ಧುಮುಕುವಾಗ ವಿದ್ಯುತ್ ತಯಾರಿಸಿ ಬೆಳಕಾದ ಸಿರಿಯನಾಡು. ಮಳೆಬಿಲ್ಲ ಕಿರೀಟವಿಟ್ಟುಕೊಂಡು ಪಶ್ಚಿಮ ಘಟ್ಟಗಳು ಕಂಗೊಳಿಸುತ್ತಿವೆ. ಏಕೀಕರಣದಿಂದ ಕನ್ನಡ ತಾಯಿ ಬಾನಿಗೆ ಮುತ್ತುಕೊಟ್ಟು ಸಂತೋಷಪಡುತ್ತಿದ್ದಾಳೆ. ಕರ್ನಾಟಕ ಏಕೀಕರಣಕ್ಕಾಗಿ ದುಡಿಯುವವರ ರಟ್ಟೆಗೆ ಶಕ್ತಿಯನ್ನು ಕೊಟ್ಟು ಹಾಕಿದ ಹೆಜ್ಜೆಯನ್ನು ಹಿಂತೆಗೆಯದಂತೆ ಮುಂದೆ ಸಾಗುವುದನ್ನು ಕಲಿಸು ನಮ್ಮಲ್ಲಿರುವ ಒಳಭೇದವನ್ನು ತೊಲಗಿಸಿ ನಾವು ಬೆವರು ಹರಿಸಿ ದುಡಿದು ಬಡತನವನ್ನು ಹೋಗಲಾಡಿಸಿ ನಮಗೆ ಶುಭವಾಗುವಂತೆ ಹರಸು ಎಂದು ಕನ್ನಡ ತಾಯಿಯನ್ನು ಕನ್ನಡ ನಾಡಿನ ಜನತೆ ಬೇಡಿದ್ದಾರೆ.

ಒಟ್ಟಾರೆ ಇಲ್ಲಿ ಕರ್ನಾಟಕ ಏಕೀಕರಣಕ್ಕಾಗಿ ದುಡಿಯಲು ಎಲ್ಲರಿಗೂ ಶಕ್ತಿಯನ್ನು ದಯಪಾಲಿಸು ಎಂದು ಕನ್ನಡ ನಾಡಿನ ವರ್ಣನೆ ಮಾಡುತ ತಾಯಿ ಭುವನೇಶ್ವರಿಯನ್ನು ಬೇಡುತ್ತಿರುವುದನ್ನು ಕಾಣಬಹುದು.

ಕರ್ನಾಟಕ ಏಕೀಕರಣದ ಸಂದರ್ಭದಲ್ಲಿ ಯಾವುದಕ್ಕೂ ಮುಂದೆ ಬರದೆ ಸುಮ್ಮನೆ ಕುಳಿತಿರುವ ಕನ್ನಡಿಗರನ್ನು ಎಚ್ಚರಿಸಲು 'ಚೆನ್ನವೀರ ಕಣವಿ'ಯವರು ತಮ್ಮ ಅಖಂಡ ಕರ್ನಾಟಕವೇ!" ಎಂಬ ಕವನದಲ್ಲಿ ಹೀಗೆ ಹೇಳುತ್ತಾರೆ.

ಅಖಂಡ ಕರ್ನಾಟಕವೇ! ವಿಶ್ವಾತ್ಮ ರೂಪಕವೆ!

ನಿದ್ರೆಯಿಂದ ಮಲಗಿರುವವರನ್ನು ಎಚ್ಚರಿಸು. ಇಲ್ಲಿ ನಿದ್ರೆ ಎನ್ನುವ ಪದ ಸೋಮಾರಿತನವನ್ನು, ಮತ್ತೊಂದು ತಿಳುವಳಿಕೆ ಇಲ್ಲದವರು ಎಂಬುದನ್ನು

ಸೂಚಿಸುತ್ತದೆ. ಅಂತಹವನ್ನು ಎಚ್ಚರಿಸು ಸೋಮಾರಿತನದಿಂದ ಮೈಬೆಳಸಿಕೊಂಡಿರು-ವವರನ್ನು ಎಬ್ಬಿಸು ಇಲ್ಲದಿದ್ದರೆ ನಮಗೆ ಈ ಸೋಲು ಖಂಡಿತ. ನಮ್ಮ ನಾಡಿಗೆ ಕೆಟ್ಟದ್ದು ಬಯಸುವವರನ್ನು ಹುಟ್ಟಿಲ್ಲದಂತೆ ನಾಶಮಾಡು. ನಮ್ಮ ಕನ್ನಡ ನಾಡಿಗೆ ಮಾರಕವಾಗಿರುವ, ಜಾತಿ, ಮತಭೇದಗಳನ್ನು ಮಾಡುವ ಜನರನ್ನು ನಾಶಮಾಡಿ ನಿನ್ನ ಮೊಗದಲ್ಲಿ ಸಂತೋಷ ಉಕ್ಕುವಂತೆ ಮಾಡು ತಾಯಿ. 'ಕವಿವರ್ಯರ', 'ಧರ್ಮಾತ್ಮರ', ಧೀರ ಮಕ್ಕಳನ್ನು ಹಡೆದ ತಾಯಿ. ಒಕ್ಕೊರಲಿನಿಂದ ಘೋಷಣೆ ಹೊರಡಿಸು, ಯಾವಾಗ ಸಿರಿಗನ್ನಡದ ಏಕೀಕರಣವಾಗುತ್ತದೋ ಅಂದು ಭಾರತದ ಬಾಗಿಲಿಗೆ ನವತೋರಣ ಹಾಕಿದಂತೆ. ಅಂದರೆ ಇಲ್ಲಿ ನಾವು ಗಮನಿಸಬೇಕಾದದ್ದು ಕರ್ನಾಟಕವೇ ಭಾರತದ ಬಾಗಿಲಿಗೆ ತೋರಣ ಅಂದರೆ ಶೋಭೆ. ಆದ್ದರಿಂದ ಕರ್ನಾಟಕ ಏಕೀಕರಣಕ್ಕಾಗಿ ಪ್ರತಿಯೊಬ್ಬರು ದುಡಿಯಬೇಕು. ಅದಕ್ಕಾಗಿ ಧೀಕ್ಷೆಯನ್ನು ತೊಡಬೇಕು ಎಂದು ಚೆನ್ನವೀರ ಕಣವಿಯವರು ಕರೆ ನೀಡಿದ್ದುದನ್ನು ಇಲ್ಲಿ ಗಮನಿಸಬಹುದು.

ಒಟ್ಟಾರೆ ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಕಾಣಿಸಿಕೊಂಡು, ಬೆಳೆದ ನವೋದಯ ಸಾಹಿತ್ಯ. ನಮ್ಮ ಕನ್ನಡ ಸಾಹಿತ್ಯಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದೆ. ಅಂದಿನ ಸಂದರ್ಭದಲ್ಲಿ ಹೆಚ್ಚಾಗಿ ಪ್ರಕೃತಿಪ್ರೇಮ, ಜೀವನ್ಮುಖಿ ಇಂತಹ ಕವನಗಳನ್ನು ರಚಿಸುತ್ತಿದ್ದಂತಹ ಕಾಲದಲ್ಲಿ ಕರ್ನಾಟಕ ಏಕೀಕರಣದ ಚಳುವಳಿಯ ಪ್ರಭಾವದಿಂದ ನಮ್ಮ ಕವಿಗಳು ಕೂಡ ಕನ್ನಡನಾಡು ಮತ್ತು ನುಡಿಯ ಬಗ್ಗೆ ಹೆಚ್ಚು ಪ್ರೇಮ ಬೆಳಸಿಕೊಂಡು ಕವನಗಳನ್ನು ರಚಿಸಿದ್ದಾರೆ. ಹಾಗಾದರೆ ಈ ಹಿಂದೆ ಇರಲಿಲ್ಲವೆ ನಾಡುನುಡಿ ಕವನಗಳು ಎಂದು ಭಾವಿಸಬಾರದು. ಒಬ್ಬ ಮನುಷ್ಯ ಸಹಜವಾಗಿ ತನ್ನ ತಾಯಿಯನ್ನು ಪ್ರೀತಿಸಿ ಒಲವು ತೋರಿಸುತ್ತಾರೆ. ಅದೇ ಅವನು ತನ್ನ ತಾಯಿಯನ್ನು ಕಳೆದುಕೊಂಡಾಗ ಅವಳಿಗಾಗಿ ಹಂಬಲಿಸುವ, ಹಾತೊರೆಯುವ ಮನಸ್ಸನ್ನು ನಾವು ಅರಿಯಬಹುದು. ಅದೇ ರೀತಿ ಹಿಂದಿನ ಕರ್ನಾಟಕದ ವೈಭವವನ್ನೂ ಸಹಜವಾಗಿ ಪಂಪ, ರನ್ನರಂತಹ ಕವಿಗಳು ತಮ್ಮದೇ ಆದ ರೀತಿಯಲ್ಲಿ ಕರ್ನಾಟಕದ ವೈಭವವನ್ನು ಹೊಗಳಿದ್ದಾರೆ. ಆದರೆ ಅದೇ ಕರ್ನಾಟಕ ಛಿದ್ರವಾಗಿ ಕನ್ನಡಿಗರೆಲ್ಲರೂ ಒಂದೊಂದು ಪ್ರದೇಶಗಳಿಗೆ ಹಂಚಿಹೋದಾಗ ಕನ್ನಡಿಗರಿಗಾದ ನೋವನ್ನು ಮತ್ತು ಮತ್ತೆ ತಮ್ಮ ನಾಡು ಏಕೀಕೃತಗೊಳ್ಳಬೇಕೆಂಬ ಹಂಬಲದಿಂದ ಕವನಗಳನ್ನು ಬರೆದಿರುವುದನ್ನು ಗಮನಿಸಬಹುದು. ಆದರೆ ಹೆಚ್ಚಾಗಿ ನಾಡುನುಡಿ ಮೇಲಿನ ಕವನಗಳು ಕಾಣಿಸಿಕೊಂಡಿದ್ದು ಕರ್ನಾಟಕ ಏಕೀಕರಣ ಚಳುವಳಿ ಸಂದರ್ಭದಲ್ಲಿ. ಈ

ಚಳುವಳಿಯು ಹೇಗೆ ನವೋದಯ ಕವಿಗಳ ಮೇಲೆ ಪ್ರಭಾವ ಬೀರಿತೋ ಹಾಗೆಯೇ ನವೋದಯ ಕವಿಗಳ ನಾಡುನುಡಿ ಕುರಿತ ಗೀತೆಗಳಿಂದ ಪ್ರೇರಣೆ ಪಡೆದುಕೊಂಡು ಕರ್ನಾಟಕ ಏಕೀಕರಣ ಚಳುವಳಿ ಮತ್ತಷ್ಟು ಜಾಗೃತಗೊಂಡದ್ದನ್ನು ನಾವು ಮರೆಯುವಂತಿಲ್ಲ.

# ಅಧ್ಯಾಯ – ೪

# ನವೋದಯ ಕಾವ್ಯದಲ್ಲಿ ನುಡಿಪ್ರಜ್ಞೆ

ನುಡಿ ಎಂದರೆ ಮಾತು, ಭಾಷೆ. ಭಾಷೆ ಒಂದು ಸಂವಹನ ಮಾಧ್ಯಮ, ಒಬ್ಬರಿಗೊಬ್ಬರು ಪರಸ್ಪರ ತಮ್ಮ ಅನಿಸಿಕೆ ಭಾವನೆಗಳನ್ನು ಹಂಚಿಕೊಳ್ಳಲು ಇರುವ ಸಾಧನ. ನಮ್ಮ ಭಾರತದಲ್ಲಿ ಹಲವಾರು ಭಾಷೆಗಳನ್ನಾಡುವ ಜನರಿದ್ದಾರೆ. ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯ ಭಾಷೆಯನ್ನಾಡುವ ಜನರಿದ್ದಾರೆ. ಹಾಗಾಗಿ ಆಯಾಯ ಭಾಷೆಯ ಜನರು ಒಂದು ಕಡೆ ನೆಲಸಿ ಸಹ ಜೀವನವನ್ನು ನಡೆಸುತ್ತಾರೆ. ಹಾಗಾಗಿಯೇ ಭಾಷೆಯ ಆಧಾರದ ಮೇಲೆಯೇ ಭಾರತದಲ್ಲಿ ರಾಜ್ಯಗಳ ವಿಂಗಡಣೆಯಾಯಿತು. ನಮ್ಮ ಭಾರತದಲ್ಲಿ ಹಲವಾರು ಭಾಷೆಗಳಿವೆ. ಉದಾ: ತಮಿಳು, ಕನ್ನಡ, ತೆಲಗು, ಮರಾಠಿ, ಉರ್ದು, ಕೊಡವ, ಮಲಯಾಳಿ. ಹೀಗೆ ಬಾಷೆ ಮತ್ತು ಉಪಭಾಷೆಗಳಿಂದ ತುಂಬಿದೆ.

ಹಾಗಾದರೆ ನುಡಿಪ್ರಜ್ಞೆ ಎಂದರೇನು? ಎಂಬ ಪ್ರಶ್ನೆ ಬಂದಾಗ ನಮ್ಮ ಭಾಷೆಯ ಮೇಲೆ ಅನ್ಯಭಾಷೆಗಳ ಧಾಳಿಯಾದಾಗ ನಮ್ಮ ಭಾಷೆ ನಾಶವಾಗದಂತೆ ಕಾಪಾಡಬೇಕು. ನಮ್ಮ ಭಾಷೆಯ ಬಗ್ಗೆ ಅಭಿಮಾನ ಹೊಂದಿರಬೇಕು. ಹಾಗೆಂದು ಪರಭಾಷೆಯನ್ನು ದ್ವೇಷಿಸಬೇಕು ಎಂದಲ್ಲ. ಆದರೆ ನಮ್ಮ ಭಾಷೆಯನ್ನು ಪ್ರೀತಿಸಬೇಕು. ಮೊದಲು ಹೆತ್ತತಾಯಿಯನ್ನು ಪೂಜಿಸಿ ಗೌರವಿಸಬೇಕು. ಆನಂತರ ಮಲತಾಯಿಯನ್ನು ಗೌರವಿಸುವಂತೆ ಮೊದಲು ನಮ್ಮ ಮಾತೃಭಾಷೆ ನಂತರ ಇನ್ನಿತರ ಭಾಷೆಯನ್ನು ಗೌರವಿಸಬೇಕು. ಆದರೆ ಇಂಗ್ಲಿಷರ ಧಾಳಿಯಿಂದ ನಮ್ಮ ನಾಡಿನ ಮೇಲೆ ಹಿಡಿತ ಸಾಧಿಸಿದಲ್ಲದೆ, ನಮ್ಮ ಭಾಷೆಯ ಮೇಲು ತನ್ನ ಹಿಡಿತವನ್ನು ಸಾಧಿಸಿತು. ಇಂದಿಗೂ ಕೂಡ ನಮ್ಮ ಕರ್ನಾಟಕದಲ್ಲಿ ಕನ್ನಡ ಮಾತನಾಡುವವರು ಶೇ. ೨೫ ಮಾತ್ರ ಉಳಿದಂತೆ ಇಂಗ್ಲಿಷ್ ಭಾಷೆ ತನ್ನ ಬಲೆಗೆ ಕನ್ನಡಿಗರನ್ನು ಸೆಳೆದುಕೊಂಡಿದೆ. ಉದಾ: ನಮ್ಮ ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿ ಕನ್ನಡ ಮಾತನಾಡುವವರು ಅಲ್ಪಸಂಖ್ಯಾತರಾಗಿದ್ದಾರೆ. ತಮಿಳು ಮತ್ತು ಇಂಗ್ಲಿಷ್ ಭಾಷೆಯೆ ಅಲ್ಲಿ ತುಂಬಿಕೊಂಡಿದೆ. ಇದರ ಅರ್ಥ ನಮ್ಮ ಭಾಷೆಯನ್ನು ನಾವು ಕೀಳಾಗಿ ನೋಡುತ್ತಿದ್ದೇವೆ. ಇಂದಿನ ಸ್ಪರ್ಧಾ ಜಗತ್ತಿನಲ್ಲಿ ಇಂಗ್ಲಿಷ್ ಕಲಿಯದಿದ್ದರೆ ಅವನಿಗೆ ಮೋಕ್ಷವೇ ಇಲ್ಲ ಎಂಬ ಮಟ್ಟಿಗೆ ಜನ ಪರಭಾಷೆಗೆ ಮಾರುಹೋಗಿದ್ದಾರೆ. ಅದು ಕರ್ನಾಟಕದಲ್ಲಿ ಮಾತ್ರ ಹೆಚ್ಚಾಗಿ ಭಾಷೆಯ ಬಗ್ಗೆ ಅಭಿಮಾನವಿಲ್ಲ. ಉಳಿದಂತೆ ತಮಿಳುನಾಡಿಗೆ ಹೋದರೆ ಅಲ್ಲಿ ಅವರು

ಬೇರೆ ಭಾಷೆಗೆ ಮಾನ್ಯತೆಯೇ ಕೊಡುವುದಿಲ್ಲ. ಬೇರೆ ಭಾಷೆಯಲ್ಲಿ ನೀರು ಕೇಳಿದರು ಅವರು ಕೊಡುವುದಿಲ್ಲ. ತಮ್ಮ ಭಾಷೆಯಲ್ಲಿಯೇ ಕೇಳಬೇಕು. ಅದು ದುರಭಿಮಾನ ಎನಿಸಿದರು. ಅದರಿಂದ ಅವರ ಭಾಷೆ ಗಟ್ಟಿಯಾಗಿ ಉಳಿದಿದೆ. ಆದರೆ ಕರ್ನಾಟಕದವರು ಹಾಗಲ್ಲ ಬೇರೆಯವರು ಯಾವ ಭಾಷೆಯಲ್ಲಿ ಬಂದು ಕೇಳಿದರು ನಾವು ಅವರ ಭಾಷೆಯಲ್ಲಿಯೇ ಅದಕ್ಕೆ ಉತ್ತರಕೊಡುತ್ತೇವೆ. ಇದು ಕೆಲಮಟ್ಟಿಗೆ ಉದಾರ ಮನಸ್ಸು ಎನಿಸಿದರು, ಭಾಷಾಭಿಮಾನ ಇಲ್ಲದುದನ್ನು ತೋರಿಸುತ್ತದೆ. ಇದರಿಂದ ಕನ್ನಡ ಭಾಷೆ ಇಂದು ಜನರಿಂದ ಕಣ್ಮರೆಯಾಗುತ್ತಿದೆ. ಹಳ್ಳಿಗಾಡಿನ ಗ್ರಾಮೀಣ ಜನರು ಕೂಡ ನಗರಗಳಿಗೆ ವಲಸೆ ಬಂದುದರಿಂದ, ನಗರ ಪ್ರದೇಶಗಳ ಪ್ರಭಾವದಿಂದ ಹಳ್ಳಿಗರು ಅನ್ಯಭಾಷೆಗೆ ಮೊರೆಹೋಗುತ್ತಿದ್ದಾರೆ. ಇದು ದುರವಸ್ಥೆಯ ಪರಮಾವಧಿ ಎನ್ನಬಹುದು.

ಅದಕ್ಕಾಗಿ ದೇ.ಜ.ಗೌ ಅವರು ಎಲ್ಲಾ ಭಾಷಣಗಳಲ್ಲಿಯೂ ಈ ಮಾತನ್ನು ಹೇಳುತ್ತಾರೆ. "ಹೆತ್ತತಾಯಿಯನ್ನು ಪ್ರೀತಿಸಿ, ಮಲತಾಯಿಯನ್ನು ದ್ವೇಷಿಸಬೇಡಿ. ಮೊದಲು ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆದವರಿಗೆ ಕರ್ನಾಟಕದ ಎಲ್ಲಾ ಭಾಗಗಳಲ್ಲಿಯೂ ಉದ್ಯೋಗ ಒದಗಿಸಬೇಕು. ನಂತರ ಇಂಗ್ಲಿಷ್ ಮಾಧ್ಯಮದವರಿಗೆ ಉದ್ಯೋಗ ಒದಗಿಸಲಿ ಎಂದು ಹೇಳುತ್ತಾರೆ. ಹಾಗೆ ಕನ್ನಡ ಮಾಧ್ಯಮದ ಶಾಲೆಗಳಿಗೆ ಹೆಚ್ಚು ಅವಕಾಶಗಳು, ಸೌಕರ್ಯಗಳನ್ನು ಒದಗಿಸಲಿ, ಹಾಗೆಂದು ಇಂಗ್ಲಿಷ್ ಶಾಲೆ ಬೇಡವೇ ಎಂದಲ್ಲ ಅಂತಹ ಆಂಗ್ಲ ಖಾಸಗಿ ಶಾಲೆಗಳ ಮೇಲೆ ಟ್ಯಾಕ್ಸ್‌ನ್ನು ಹಾಕಬೇಕು ಎಂಬುದಾಗಿ ಹೇಳುತ್ತಾರೆ.

ಇಂತಹ ಪರಿಸ್ಥಿತಿ ನವೋದಯ ಕಾಲದಲ್ಲಿಯೂ ಇತ್ತು. ಆ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆ ಹೆಚ್ಚು ಪ್ರಭಾವವನ್ನು ಬೀರಿತು. ಆಂಗ್ಲರೇ ಭಾರತವನ್ನು ಆಳ್ವಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಡಲಾಯಿತು. ಇದರಿಂದ ಕರ್ನಾಟಕದಲ್ಲೂ ಇಂಗ್ಲಿಷ್ ಶಿಕ್ಷಣ ಜಾರಿಗೆ ಬಂದಿತು. ಆಗ ಅಲ್ಲಿನ ಆಡಳಿತ, ವ್ಯವಹಾರ ಎಲ್ಲವೂ ಇಂಗ್ಲಿಷಿನಲ್ಲಿಯೆ ನಡೆಯುತ್ತಿತ್ತು. ನಂತರ ಭಾರತ ಸ್ವತಂತ್ರವಾದ ಮೇಲೆ ಕರ್ನಾಟಕ ಏಕೀಕರಣ ಚಳುವಳಿಯ ಸಂದರ್ಭದಲ್ಲಿ ಆಯಾಯ ಭಾಷೆಯ ಆಧಾರದ ಮೇಲೆ ರಾಜ್ಯಗಳನ್ನು ವಿಂಗಡಣೆ ಮಾಡಲಾಯಿತು. ಆದರೂ ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದ ನಮ್ಮ ಭಾಷೆಯ ರಕ್ಷಣೆಗಾಗಿ ನಾವು ಹೋರಾಟ ಮಾಡಬೇಕಾಗಿದೆ. ನಮ್ಮ ಜನರಲ್ಲಿ ನಮ್ಮ ಭಾಷೆ, ನಮ್ಮ ನುಡಿ ಎಂಬ ಜಾಗೃತಿಯನ್ನು ಮೂಡಿಸಬೇಕಾಗಿದೆ. ಅದನ್ನೇ 'ನುಡಿ ಪ್ರಜ್ಞೆ' ಎಂಬುದಾಗಿ ಕರೆಯಲಾಗುತ್ತದೆ.

ನವೋದಯ ಕಾಲದ ಕವಿಗಳು ತಮ್ಮ ಸಾಹಿತ್ಯದ ಮೂಲಕ ನಮ್ಮ ಭಾಷೆ ಕನ್ನಡ ಎಷ್ಟು ಶ್ರೇಷ್ಠವಾದುದು, ಎಷ್ಟು ಮಧುರವಾದುದು, ಹಿತವಾದುದು ಎಂಬುದನ್ನು ತಮ್ಮ ಕವನಗಳ ಮೂಲಕ ಪ್ರಸ್ತುತಪಡಿಸಿದ್ದಾರೆ. ಈ ನುಡಿ ಪ್ರಜ್ಞೆ ಪ್ರಾಚೀನಕಾಲದಿಂದಲೂ ಇದೆ ಆದರೆ ನಮ್ಮ ಭಾಷೆ ಹೆಚ್ಚು ನಿರ್ಲಕ್ಷ್ಯಕ್ಕೆ ಒಳಗಾದುದು ಇಂಗ್ಲಿಷ್ ಭಾಷೆಯ ಪ್ರಭಾವದ ನಂತರ. ಆದ್ದರಿಂದ ಅಳಿದುಹೋಗುತ್ತಿದ್ದ ನಮ್ಮ ಭಾಷೆಯನ್ನು ಉಳಿಸಿಕೊಳ್ಳಲು, ನಮ್ಮ ಕನ್ನಡಿಗರಲಿ ಜಾಗೃತಿಯನ್ನು ಮೂಡಿಸಲು ಕವಿಗಳು ಈ ರೀತಿಯ ನುಡಿಯನ್ನು ಕುರಿತಾದ ಕವಿತೆಗಳನ್ನು ಬರೆದಿದ್ದಾರೆ. ಆ ಕವಿತೆಗಳಲ್ಲಿ ನುಡಿ ಪ್ರಜ್ಞೆ ಹೇಗೆ ಮೂಡಿಬಂದಿದೆ ಎಂಬುದನ್ನು ಮುಂದಿನ ಕವನಗಳಲ್ಲಿ ಗಮನಿಸೋಣ.

ನವೋದಯ ಕಾಲದ ಆಚಾರ್ಯ ಪುರುಷರಾದ ಬಿ.ಎಂ.ಶ್ರೀ.ಯವರ ಮಾತೃಭಾಷೆ ಕನ್ನಡ ಅದರ ಮೇಲೆ ಅವರಿಗೆ ಅಪಾರವಾದ ಪ್ರೀತಿ, ಗೌರವ ಇದೆ. ಆದರೆ ಅವರಿಗೆ ಇಂಗ್ಲಿಷ್ ಭಾಷೆಯ ಪ್ರಭಾವವು ಗಾಢವಾಗಿ ಬೀರಿದೆ. ಇದರಿಂದ ಯಾವ ಭಾಷೆಯಲ್ಲಿ ತಾನು ಏಳಿಗೆಯನ್ನು ಹೊಂದಬೇಕು ಎಂಬ ಗೊಂದಲದಲ್ಲಿದ್ದು ನಂತರ ಎರಡು ಭಾಷೆಯು ಮುಖ್ಯ ಕನ್ನಡ ಮತ್ತು ಇಂಗ್ಲಿಷ್ ಎರಡು ನಮ್ಮ ಜೀವನಕ್ಕೆ ಅವಶ್ಯಕ ಎಂದು ತಿಳಿದು, ಅವರು ತಮ್ಮ ''ಕಾಣಿಕೆ'' ಕವಿತೆಯಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

> "ಮೊದಲು ತಾಯ ಹಾಲು ಕುಡಿದು
> ಲಲ್ಲೆಯಿಂದ ತೊದಲಿ ನುಡಿದು,
> ಕೆಳೆಯರೊಡನೆ ಬೆಳೆದುಬಂದ
> ಮಾತದಾವುದು
> ನಲ್ಲೆಯೊಲವ ತೆರೆದು ತಂದ
> ಮಾತದಾವುದು"[೧]

ಮೊದಲು ಹುಟ್ಟಿದ ತಕ್ಷಣ ನಾವು ತಾಯಿಯ ಎದೆಹಾಲು ಕುಡಿದು ಮೊದಲಿಗೆ ನಮ್ಮ ಭಾಷೆಯಲ್ಲಿಯೇ ತೊದಲು ನುಡಿಯನ್ನಾಡುತ್ತೇವೆ. ಮೊದಲಿಗೆ ನಾವು ಕರೆಯುವುದು ಅಮ್ಮ ಎಂದು, ಹಾಗೆಯೇ ಆಟವಾಡುವಾಗ ನಮ್ಮ ಮಾತೃಭಾಷೆಯಾದ ಕನ್ನಡದಲ್ಲಿಯೇ ಮಾತನಾಡುತ್ತೇವೆ. ನಾವು ಹಾಡುವಾಗ, ಕಥೆಗಳನ್ನು ಹೇಳುವಾಗ, ನಮ್ಮ ದುಃಖಗಳನ್ನು ಹೇಳಿಕೊಳ್ಳುವಾಗ ನಾವು ಕನ್ನಡದಲ್ಲಿಯೇ ಹೇಳಿಕೊಳ್ಳುತ್ತೇವೆ.

---

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೯೫.

ಅಂದರೆ ಇಲ್ಲಿ ನಮ್ಮ ತಾಯಿ ಕನ್ನಡ. ಮೊದಲು ಅವಳಿಗೆ ಗೌರವ, ಪ್ರೀತಿಯನ್ನು ತೋರಿಸಬೇಕು. ನಂತರ ಉಳಿದ ಭಾಷೆಗಳು ಎಂಬರ್ಥದಲ್ಲಿ ಹೇಳಿದ್ದಾರೆ.

"ಕನ್ನಡನುಡಿ ನಮ್ಮ ಹೆಣ್ಣು
ನಮ್ಮ ತೋಟದಿನಿಯ ಹಣ್ಣು
ಬಳಿಕ ಬೇರೆ ಬೆಳೆದ ಹೆಣ್ಣು
ಬಳಿಗೆ ಸುಳಿದಳು
ಹೊಸದು ರಸದ ಬಳ್ಳಿ ಹೆಣ್ಣು
ಒಳಗೆ ಸುಳಿದಳು"[೧]

ಮೊದಲು ಕನ್ನಡವೇ ನಮ್ಮ ನುಡಿ ಅವಳೆ ನಮ್ಮ ತಾಯಿ, ಆ ಭಾಷೆಯಲ್ಲಿ ಮಾತನಾಡುತ್ತಿದ್ದರೆ ಅದು ನಮ್ಮ ತೋಟದ ಸಿಹಿಯಾದ ಹಣ್ಣು ತಿಂದಷ್ಟೇ ಸಿಹಿ, ಆಸ್ವಾದ, ಆದರೆ ನಂತರ ಬೇರೆಕಡೆ ಬೆಳೆದ ಹೆಣ್ಣು ನಮ್ಮ ಬಳಿಗೆ ಬಂದಳು. ಅವಳು ಹೊಸ ಹೆಣ್ಣಾದ್ದರಿಂದ ಪ್ರತಿಯೊಬ್ಬರಿಗೂ ಇಷ್ಟವಾಯಿತು. ನಮ್ಮೊಳಗೆ ಬಂದು ಸೇರಿಬಿಟ್ಟಳು. ಕನ್ನಡ ನನ್ನ ಜೀವದುಸಿರು ನಮ್ಮನ್ನು ಸಂತೋಷಪಡಿಸುತ್ತಾಳೆ. ಆದರೆ ಇಂಗ್ಲಿಷ್ ಭಾಷೆ ಈ ನಮ್ಮೊಳಗೆ ಬಂದು ಈಗ "ಒಮ್ಮೆ ಇವಳು ಒಮ್ಮೆ ಅವಳು" ಅಂದರೆ ಒಂದು ಬಾರಿ ಕನ್ನಡ, ಮತ್ತೊಂದು ಸಲ ಇಂಗ್ಲಿಷ್ ನನ್ನನ್ನು ಆಕರ್ಷಿಸುತ್ತವೆ. ಆದ್ದರಿಂದ ನನಗೆ ಈ ಎರಡು ಭಾಷೆಯು ಬೇಕು. ನನಗೆ ಇಬ್ಬರಿಂದಲೂ ಹಬ್ಬ, ಆನಂದ.

"ಇವಳ ಸೊಬಗನವಳು ತೊಟ್ಟು
ನೋಡ ಬಯಸಿದೆ;
ಅವಳ ತೊಡಿಗೆ ಇವಳಿಗಿಟ್ಟು
ಹಾಡಬಯಸಿದೆ"[೨]

ಅಂದರೆ ಇಲ್ಲಿ ಕನ್ನಡದೊಳಗೆ ಇಂಗ್ಲಿಷ್ ಬೆರೆತುಹೋಗಿದೆ. ಆದ್ದರಿಂದ ಕನ್ನಡ ಮಾಡನಾಡುವಾಗ ಅಥವಾ ಓದುವಾಗ ಇಂಗ್ಲಿಷ್ ಕೂಡ ಅಗತ್ಯವಾಗಿದೆ. ಹಾಗೆಂದು ಕನ್ನಡ ಕಲಿಯಬಾರದೇ ಎಂದಲ್ಲ ಎರಡು ಮುಖ್ಯ. ಇದನ್ನು ಅರಿತವರಿಗೆ ಇದು ಬಹುದೊಡ್ಡ ಆಶ್ಚರ್ಯವಾದ ಸಂಗತಿ. ಈ ವಿಷಯ ಪ್ರತಿಯೊಬ್ಬರಿಗೂ ತಿಳಿಯಲೆಂದೇ

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೯೫.
೨. ಅದೇ, ಪುಟ. ೯೬.

ನಾವು ಇಂಗ್ಲಿಷ್ ಗೀತೆಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದೇನೆ. ಇದು ಕನ್ನಡಕ್ಕಾಗಿ ನನ್ನ ಅಳಿಲು ಸೇವೆ ಎಂದು ಹೇಳುತ್ತಾರೆ. ಅಂದರೆ ಇಂಗ್ಲಿಷ್ ಸಾಹಿತ್ಯವನ್ನು ತಿಳಿದುಕೊಂಡು ಅದರಲ್ಲಿರುವ ಮುಖ್ಯ ಅಂಶಗಳನ್ನು ನಾವು ತೆಗೆದುಕೊಳ್ಳಬೇಕು. ಅದರಷ್ಟೇ! ಉನ್ನತ ಮಟ್ಟಕ್ಕೆ ನಮ್ಮ ಭಾಷೆಯು ಹೋಗಬೇಕು ಎಂಬುದು ಇಲ್ಲಿನ ಆಶಯವಾಗಿದೆ.

ನವೋದಯ ಕಾಲದ ಮತ್ತೊಬ್ಬ ಮುಖ್ಯಕವಿ ಬೆಟಗೇರಿ ಕೃಷ್ಣಶರ್ಮ. ಇವರು ಕನ್ನಡ ನುಡಿ ಎಷ್ಟು ಸೊಗಸಾದುದು, ಮಧುರವಾದುದು. ಅದು ನಮ್ಮನ್ನು ನಮ್ಮ ಮನಸ್ಸನ್ನು ಸಂತೋಷಗೊಳಿಸುವಂತದ್ದು ಎಂಬುದನ್ನು ತಮ್ಮ 'ಕನ್ನಡ ನುಡಿ' ಕವಿತೆಯಲ್ಲಿ ಅಭಿವ್ಯಕ್ತಿಸಿದ್ದಾರೆ.

> ಎನಿತು ಇನಿದು ಈ ಕನ್ನಡ ನುಡಿಯು
> ಮನವನು ತಣಿಸುವ ಮೋಹನ ಸುಧೆಯು
> ಗಾನವ ಬೆರೆಯಿಸಿ
> ವೀಣೆಯ ದನಿಯೊಳು
> ವಾಣಿಯ ನೇವುರ
> ನುಡಿಸುತೆ ಕುಣಿಯಲು
> ಮಾಣದೆ ಮೆರೆಯುವ ಮಂಜುಲರವವೋ? [೧]

ನಮ್ಮ ಕನ್ನಡ ನುಡಿಯು ಎಂತಹುದು ಎಂದರೆ ನಮ್ಮ ಮನಸ್ಸನ್ನು ಸಂತೋಷಗೊಳಿಸುವ ಅಮೃತ. ನಮ್ಮ ಕನ್ನಡ ಭಾಷೆಗೆ ಸಂಗೀತವನ್ನು ಬೆರಸಿ, ವೀಣೆಯ ತಂತಿಯೊಡನೆ ನುಡಿಸುತ ಹಾಡಿದರೆ ಅದೊಂದು ಸುಮಧುರವಾದ ಇಂಪಾದ ಗಾನವಾಗುತ್ತದೆ. ಶ್ರೀಕೃಷ್ಣನ ಮುರಳಿಯ ನಾದಕ್ಕೆ ಕನ್ನಡದ ಸ್ವರವನ್ನು ಸೇರಿಸಿ ಹೆಣ್ಣುಮಕ್ಕಳೆಲ್ಲ ಬೆಳದಿಂಗಳ ಇರುಳಿನಲ್ಲಿ ಸಂಗೀತವನ್ನು ಬೆರಸಿ ಹಾಡುತ್ತಿದ್ದರೆ ಅದಕ್ಕೆ ಬೇರೆ ಸ್ವರ್ಗವೇ ಬೇಕಿಲ್ಲ. ಆ ಭಾಗವೇ ಸ್ವರ್ಗದಂತೆ ಇರುತ್ತದೆ.

> ಗಿಳಿಗಳು ಉಲಿಯುವ
> ಮೆಲು ಮಾತುಗಳೋ?
> ಕಳಕಂಠಗಳಾ
> ಚೆಲುವಿನ ಕುಕಿಲೊ?

---

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೧೦೧.

ಅಳಿಗಳ ಬಳಗದ ಬೆಳಗಿನ ಉಲಿಯೋ?
ಎನಿತು ಇನಿದು ಈ ಕನ್ನಡ ನುಡಿಯು![೧]

ಕನ್ನಡ ನುಡಿ ಎಷ್ಟು ಮಧುರವಾಗಿರುತ್ತದೆ ಎಂದರೆ ಗಿಳಿಗಳು ಉಲಿದಾಗ ಅನಿಸುವ ಮೆಲುಮಾತಿನಂತೆ, ಕೋಗಿಲೆಗಳು ಕೂಗುವ ಚೆಲುವಿನ ಸ್ವರದಂತೆ, ಬೆಳಗಿನ ಜಾವ ಕೂಗುವ ಗುಬ್ಬಚ್ಚಿಗಳ ದನಿಯಂತೆ ಸುಮಧುರವಾಗಿರುತ್ತದೆ. ಎಷ್ಟು ಸುಂದರ ಸೊಗಸು ಈ ಕನ್ನಡನುಡಿ ಎಂಬುದಾಗಿ ಹೇಳುತ್ತಾರೆ. ಒಟ್ಟಾರೆ ಕನ್ನಡ ನುಡಿ ಬಲುಸೊಗಸು, ಅದು ಹಕ್ಕಿಗಳ ಇಂಚರದಂತೆ ಮೃದುಮಧುರವಾಗಿರುತ್ತದೆ. ಹಕ್ಕಿಗಳ ಕೂಗಿನಲ್ಲಿರುವ ನೈಜವಾದ ಗೇಯತೆ ನಮ್ಮ ಕನ್ನಡ ನುಡಿಗಿದೆ. ಅದನ್ನು ದೇವಭಾಷೆಯಂತೆ ನಾವು ಗೌರವಿಸುತ್ತೇವೆ. ಕನ್ನಡದಲ್ಲಿ ನುಡಿಯುತ್ತಿದ್ದರೆ ನಮ್ಮ ಮನಸ್ಸು, ಉಲ್ಲಾಸಭರಿತವಾಗಿ, ಆನಂದದಿಂದ ಕುಣಿದಾಡುತ್ತದೆ. ಅದು ಅಮೃತದಂತೆ ಸೊಗಸಾಗಿದೆ ಎಂಬುದಾಗಿ 'ಆನಂದ ಕಂದ'ರು ಅಭಿಪ್ರಾಯಪಡುತ್ತಾರೆ.

ನವೋದಯ ಕಾಲದ ಮತ್ತೊಬ್ಬ ಪ್ರಮುಖ ಕವಿಗಳಾದ 'ಹನುಮಂತ ಗೋವಿಂದ ಕಟ್ಟಿ' ಇವರು ತಮ್ಮ 'ಕನ್ನಡ' ಕವಿತೆಯಲ್ಲಿ ಕನ್ನಡದ ಬಗೆಗಿನ ಅಭಿಮಾನ ಅದರ ಶ್ರೇಷ್ಠತೆಯನ್ನು ಎತ್ತಿಹಿಡಿದಿದ್ದಾರೆ.



"ತನ್ನದು ಎಂಬುದು ಏನಿಲ್ಲೆ
ಕನ್ನಡ ನುಡಿಯಲಿ ಹುರುಳಿಲ್ಲೆ?

ಮಾನವ ಜಾತಿಯ ಜೀವಾಳ। ಭಾಷಾದೇವಿಯೊಳಿಲ್ಲೇನು?
ಏನಿದು? ಐಕ್ಯದ ನಿಜಬೀಜ। ತಾಯ್ನುಡಿಯೊಲವಿನೊಳಿಲ್ಲೇನು?
ಉನ್ನತ ಸಂಸ್ಕೃತಿಯೊಳಬೆಳಸು। ಕನ್ನಡ ತಾಯಿಗೆ ಇಲ್ಲೇನು"[೨]

ಕವಿ ಹೇಳುವಂತೆ ನನ್ನದು ಎಂಬುದು ಏನಾದರೂ ಇದ್ದರೆ ಅದು ಕನ್ನಡ ನುಡಿಯಲ್ಲಿಯೇ ಇದೆ. ಮನುಷ್ಯ ಜಾತಿಯ ಜೀವಾಳವೆ, ಭಾಷೆ ಎಂಬ ಜೀವಿಯಲ್ಲಿ ಅಡಗಿದೆ. ಐಕ್ಯದ ನಿಜವಾದ ಬೀಜ ಇರುವುದು ನಮ್ಮ ಮಾತೃಭಾಷೆಯ ಒಲವಿನಲಿ, ಕನ್ನಡ ಭಾಷೆಯಲ್ಲಿ ಉನ್ನತ ಸಂಸ್ಕೃತಿ ಅಡಗಿದೆ. ಅಂದರೆ ನಮ್ಮ ಭಾಷೆಯಲ್ಲಿ ನಯ, ವಿನಯ, ಸಂಸ್ಕೃತಿ ಎಂಬುದು ತುಂಬಿ ತುಳುಕಾಡುತ್ತದೆ. ನಮ್ಮ ಭಾಷೆಯೇ ನಮಗೆ ಸರ್ವಸ್ವ ಕನ್ನಡ ಭಾಷೆಯ ನಂದನ ತೋಟದಲ್ಲಿ ಸೊಗಸಿನ ಝರಿಗಳು ಹರಿಯುತ್ತದೆ.

---

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೧೦೨.

೨. ಅದೇ, ಪುಟ. ೧೦೨.

ಅಂದರೆ ಕನ್ನಡ ಭಾಷೆಯಲ್ಲಿಯೇ ವಿಭಿನ್ನ ಶೈಲಿಗಳು ಇವೆ ಎಂಬುದಾಗಿ ಅರ್ಥೈಸಬಹುದು. ಕನ್ನಡ ಭಾಷೆಯ ಪ್ರೀತಿಯ ನುಡಿಯ ಕಡಲೊಳಗೆ ವಿದ್ಯೆಯೆಂಬ ನದಿಗಳು ಕೂಡಿವೆ. ಅಂದರೆ ಕಡಲಿಗೆ ಹೇಗೆ ಹಲವಾರು ನದಿಗಳು ಸೇರುತ್ತವೋ ಹಾಗೆ ನಮ್ಮ ಕನ್ನಡದ ನುಡಿಯಲ್ಲಿ ಹಲವಾರು ಕವಿಗಳು, ವಿದ್ವಾಂಸರು ಕೆಲಸ ಮಾಡಿದ್ದಾರೆ. ಈ ಉನ್ನತವಾದ ನಾಡಿನ ಗೂಡಿನಲ್ಲಿ ಅಂದರೆ ಕರ್ನಾಟಕದಲ್ಲಿ ಧಾರ್ಮಿಕತೆಯನ್ನು ಸಾರುವ ಸಂತರು ಇಲ್ಲಿಯೇ ಜನಿಸಿದ್ದಾರೆ. ಅಂತಹ ಶ್ರೇಷ್ಠವಾದ ನಾಡು ನುಡಿ ನಮ್ಮದು. ಕನ್ನಡದ ಕವಿಕೋಗಿಲೆಗಳು ಉಲಿದದ್ದು ಇಲ್ಲಿಯೇ. ಕನ್ನಡ ಭಾಷೆಯಲ್ಲಿಯೇ. ಸವಿಯಾದ ನವರಸಗಳು ಸಂಚರಿಸಿದ್ದು ಇಲ್ಲಿಯೇ। ಈ ಕನ್ನಡ ಸಾಹಿತ್ಯದಲ್ಲಿ.

> "ನನ್ನಿಯ ಮೇಘವು ಕರೆದಿಲ್ಲೆ? ಬನ್ನದ ಬೀಜವು ಹುರಿದಿಲ್ಲೆ
> ಗರ್ವದ ರಾವಣನಳಲಿಸಿದಾ। ಹನುಮಂತನಾವ ನುಡಿಗುಡಿಯು
> ಪೂರ್ವದ ಹರ್ಷನ ಸೋಲಿಸಿದಾ। ಪುಲಿಕೇಶಿ ಯಾವ ನುಡಿಗುಡಿಯು
> ಓರ್ವಳೆ ಶಿವರಾಜನ ತಡೆದಾ। ಮಲ್ಲವ್ವನಾವ ನುಡಿಗುಡಿಯು"[೧]

ಈ ಮೇಲಿನ ಕವನದಲ್ಲಿ ಕನ್ನಡಿಗರು ಎಂತವರು ಎಂಬುದನ್ನು ವಿವರಿಸುತ್ತ ಸತ್ಯದ ಮೋಡವು ಕರಗಿ ಮಳೆಯಾಗಿ ಹನಿದದ್ದು ಈ ಕನ್ನಡನಾಡಿನಲ್ಲಿ, ಗರ್ವದಿಂದ ಮೆರೆಯುತ್ತಿದ್ದ ರಾವಣನನ್ನು ಅಳಿಸಿದ ಹನುಮಂತ ನಮ್ಮ ಕನ್ನಡಿಗ, ಪೂರ್ವದ ಹರ್ಷವರ್ಧನನ್ನು ಸೋಲಿಸಿದ ಇಮ್ಮಡಿ ಪುಲಿಕೇಶಿ ನಮ್ಮ ಕನ್ನಡ ನಾಡಿನವನು ಒಬ್ಬಳೇ ಹೋರಾಡಿ ಶಿವರಾಜನನ್ನು ತಡೆದ, ಮಲ್ಲವ್ವ ನಮ್ಮ ಕನ್ನಡನಾಡಿನವಳು. ಅಂದರೆ ಅತ್ಯಂತ ಶ್ರೇಷ್ಠ, ವೀರಾದಿ ವೀರರು ಜನಿಸಿದ್ದು ಕನ್ನಡನಾಡಿನಲ್ಲಿ ಅವರೆಲ್ಲ ಕನ್ನಡಿಗರು ಎಂಬ ಹೆಮ್ಮೆ ಇಲ್ಲಿದೆ. ಕನ್ನಡಿಗರ ವೀರತನ, ಕನ್ನಡಿಗರ ಭಕ್ತಿ, ಕನ್ನಡಿಗರ ಶೌರ್ಯ ಇವು ಎಂದಿಗೂ ನಾಶಹೊಂದುವುದಿಲ್ಲ. 'ಕನ್ನಡದ ಕಸ್ತೂರಿ ಕಂಪಲ್ತೆ' ಅಂದರೆ ಕಸ್ತೂರಿ ಹೂ ಹೇಗೆ ಸುವಾಸನೆ ಬೀರುತ್ತ ತನ್ನ ಸುತ್ತಲಿನವರೆಲ್ಲರಿಗೂ ಸುವಾಸನೆ ಬೀರುತ್ತದೋ ಹಾಗೆ ಕನ್ನಡವೆಂಬ ಕಸ್ತೂರಿ ಕನ್ನಡಿಗರ ಸಿರಿಯನ್ನು ಮೆರೆದಿದೆ. ತನ್ನ ಸುತ್ತಮುತ್ತಲಿನ ಎಲ್ಲಾ ಭಾಷೆಗಳಿಗಿಂತ ಕನ್ನಡ ಶ್ರೇಷ್ಠವಾಗಿ ನಿಲ್ಲುತ್ತದೆ.

---

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೧೦೨.

ಒಟ್ಟಾರೆಯಾಗಿ ಕನ್ನಡ ನುಡಿಯಲ್ಲಿ ಒಲವಿದೆ, ಬಲವಿದೆ, ಸತ್ಯವಿದೆ, ಸಂಸ್ಕೃತಿಯಿದೆ, ವೀರತನವಿದೆ, ಧಾರ್ಮಿಕತೆಯಿದೆ, ರಸವಿದೆ. ಆದ್ದರಿಂದ ಕನ್ನಡ ನುಡಿ ಶ್ರೇಷ್ಠವಾದುದು ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.

ನವೋದಯ ಕಾಲದ ಮತ್ತೊಬ್ಬ ಕವಿ 'ಜಿ.ಪಿ.ರಾಜರತ್ನಂ'. ಇವರು ಕನ್ನಡದ ಅಭಿಮಾನವನ್ನು ಒಬ್ಬ ಕುಡುಕ ಮಾತಾಡುವ ಧಾಟಿಯಲ್ಲಿ ಅಭಿವ್ಯಕ್ತಿಸುತ್ತಾರೆ. ಅಂದರೆ ಇವರ ಅನಿಸಿಕೆಯಲ್ಲಿ ಯಾರು ಬೇಕಾದರೂ ಸುಳ್ಳನ್ನು ಹೇಳಬಹುದು. ಆದರೆ ಒಬ್ಬ ಕುಡುಕ ಕುಡಿದರೆ ಅವನು ತನ್ನ ಮನಸ್ಸಿನಲ್ಲಿ ಇರುವುದೆಲ್ಲವನ್ನು ಅಭಿವ್ಯಕ್ತಿಸುತ್ತಾನೆ. ಆದ್ದರಿಂದ ನಾನು ಕೂಡ ನನ್ನ ಮನಸ್ಸಿನಲ್ಲಿರುವುದನ್ನು ನೇರವಾಗಿ ಹೇಳುತ್ತೇನೆ ಎಂಬುದಾಗಿ ಜಿ.ಪಿ.ರಾಜರತ್ನಂ ಅವರು ಹೇಳುತ್ತಾರೆ. ಆ ಹಿನ್ನೆಲೆಯಲ್ಲಿ ಕನ್ನಡದ ಮೇಲಿನ ಅಭಿಮಾನವನ್ನು ತಮ್ಮ 'ಕನ್ನಡ ಪದಗೊಳು' ಎಂಬ ಕವಿತೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.

"ಯೆಂಡ ಯೆಡ್ತಿ ಕನ್ನಡ ಪದಗೊಳ್  
ಅಂದ್ರೆ ರತ್ನಂಗ್ ಪ್ರಾಣ!  
ಬುಂಡೇನ್ ಎತ್ತಿ ಕುಡಿದ್ಬುಟ್ಬಾಂದ್ರೆ  
ತಕ್ಕೋ! ಪದಗೊಳ್ ಬಾಣ"[೧]

ಜಿ.ಪಿ.ರಾಜರತ್ನಂ ಅವರಿಗೆ ಹೆಂಡ, ಹೆಂಡ್ತಿ ಮತ್ತು ಕನ್ನಡಭಾಷೆ ಎಂದರೆ ಅವರಿಗೆ ತಮ್ಮ ಪ್ರಾಣಕ್ಕೆ ಸಮಾನ. ಹೆಂಡವನ್ನು ದೇಹದೊಳಕ್ಕೆ ಸೇರಿಸಿದರೆ ಸಾಕು ಅವರೊಳಗಿನ ಕನ್ನಡದ ಅಭಿಮಾನ ಮಾತಿನ ಮೂಲಕ ಹೊರಕ್ಕೆಬರುತ್ತದೆ. ಭಗವಂತ ಏನಾದ್ರು ಭೂಮಿಗೆ ಬಂದು ನನ್ನ ಹತ್ತಿರ ಬಂದು ನಿನ್ನ ಪರೀಕ್ಷೆ ಮಾಡ್ತೀನಿ ಅಂತ ಹೇಳ್ತಾನೆ. ಅವನ್ಗೆ ಯಾವಾಗಲೂ ಭಕ್ತರ ಮೇಲೆ ಅವನ್ಗೆ ಕಣ್ಣು. ಇಲ್ಲಿ ಯಾವಾಗಲೂ ಒಳ್ಳೆಯವರನ್ನೇ ದೇವರು ಪರೀಕ್ಷೆ ಮಾಡ್ತಾನೆ ಕಷ್ಟಗಳನ್ನು ಕೊಟ್ಟು ಅವನ ಸತ್ಯವನ್ನು ಪರೀಕ್ಷೆ ಮಾಡುತ್ತಾನೆ. ಹಾಗಾಗಿ ದೇವರಿಗೆ ಭಕ್ತರ ಮೇಲೆ ಕಣ್ಣು.

ಹೆಂಡ ಕುಡಿಯೋದನ್ನು ಬಿಟ್ಟುಬಿಡು ಅಂದ್ರೆ ದೇವರ ಮಾತಿಗೆ ನಾ ಅಡ್ಡ ಬರೋದಿಲ್ಲ. ಹಾಗೇನಾದರೂ ದೇವರ ಮಾತಿಗೆ ಅಡ್ಡಬಂದ್ರೆ ದೇವರು ಎಂತಾ ಶಿಕ್ಷೆ ಕೊಟ್ಟರೂ ಅನುಭವಿಸುತ್ತೀನಿ. ಹೆಂಡ ಏನೋ ಬಿಟ್ಟೇ, ಹಾಗೆ ನಿನ್ನ ಹೆಂಡ್ತೀನು ಬಿಟ್ಟು ಬಿಡು ಅಂದ್ರೆ ದೊಡ್ಡ ಒಂದು ಕಾಟನೇ ಕಳೆದುಹೋಯ್ತು ಅಂತ ಕುಣದಾಡ್ತೀನಿ,

---

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೧೦೩.

ಅಂದರೆ ಯೆಂಡ ಮತ್ತು ಹೆಂಡ್ತೀನ ಬಿಟ್ಟು ಬಿಡು ಅಂದ್ರೆ ಮುಲಾಜಿಲ್ಲದೆ ಬಿಟ್ಟುಬಿಡ್ತೀನಿ. ಅಂದರೆ ಯೆಂಡ ಇತ್ತೀಚೆಗೆ ಕಲಿತುಕೊಂಡದ್ದು, ಹೆಂಡತಿ ಮಧ್ಯದಲ್ಲಿ ಬಂದೋಳು ಅವರನ್ನು ಬೇಕಾದರೂ ಬಿಡ್ತೀನಿ ಆದ್ರೆ ಕನ್ನಡ ಭಾಷೆಯನ್ನು ಮಾತ್ರ ಬಿಡೋದಿಲ್ಲ ಎಂಬ ಅರ್ಥ ಇದೆ.

> "ಕನ್ನಡ ಪದಗೊಳ್ ಆಡೋದ್ನೆಲ್ಲ
> ನಿಲ್ಲೀಸ್ ಬುಡಬೇಕ್ ರತ್ನ!
> ಅಂತ ಜೌನ್ ಅಂದ್ರೆ – ದೇವ್ರ್ ಆದ್ರ್ ಏನು!
> ಮಾಡ್ತೀನ್ ನನ್ಗೆ ಖತ್ನ"[೧]

ರಾಜರತ್ನಂ ಅವರ ಕನ್ನಡದ ಮೇಲಿನ ಅಭಿಮಾನ ಎಂಥದ್ದು ಎಂಬುದು ಈ ಕವಿತೆಯಲ್ಲಿ ವ್ಯಕ್ತವಾಗುತ್ತದೆ. ದೇವರು ಏನ್ ಬೇಕಾದ್ರು ಬಿಡು ಅನ್ನಲಿ ಬಿಡ್ತೀನಿ, ಆದರೆ ಕನ್ನಡ ಪದಗಳನೇನಾದ್ರು ಬಿಡು ಅಂದ್ರೆ, ದೇವರಾದ್ರು ನಂಗೇನು ನಾನು ಅವನ ಕೊಲೆನೇ ಮಾಡ್ತೀನಿ. ಅಂದರೆ ಕನ್ನಡಕ್ಕೆ ಯಾರೇ ಅವಮಾನ ಮಾಡಿದರೂ ನಾನು ಅವರನ್ನ ಸುಮ್ಮನೇ ಬಿಡುವುದಿಲ್ಲ ಎಂಬ ಧಾಟಿ ಇದೆ. ವೇದ, ಶಾಸ್ತ್ರ ಪುರಾಣಗಳನ್ನು ಓದುವ ಬ್ರಾಹ್ಮಣರೆಲ್ಲ ದೇವ್ರೆ ಆದ್ರು ಸರಿ, ಕನ್ನಡದ ಸುದ್ದಿಗೆ ಏನಾದ್ರು ಬಂದ್ರೆ ಅವರ ಮಾನವನ್ನು ತೆಗೆತೀನಿ, ಅಂದರೆ ದೇವ ಭಾಷೆ ಸಂಸ್ಕೃತ ಎಂದು ಬ್ರಾಹ್ಮಣರು ಕನ್ನಡವನ್ನು ಹೀಯಾಳಿಸಿದರೆ ನಾ ಸುಮ್ಮನೆ ಇರುವುದಿಲ್ಲ ಅವರ ವಿರುದ್ಧ ಹೋರಾಟ ಮಾಡುತ್ತೇನೆ ಎಂಬ ಅರ್ಥ ಇದೆ.

> "ನರಕಕ್ ಇಳ್ಸಿ ನಾಲ್ಗೆ ಸೀಳ್ಸಿ
> ಬಾಯ್ ಒಲಿಸಾಕಿದ್ರೂನೆ
> ಮೂಗ್ನಲ್ ಕನ್ನಡ ಪದವಾಡ್ತೀನಿ
> ನನ್ ಮನಸನ್ ನೀ ಕಾಣೆ!"[೨]

ನಾನು ದೇವರಿಗೆ ಹೀಗೆ ಅಂದೆ ಅಂತ ನನ್ನ ನರಕಕ್ಕೆ ಕಳ್ಸಿ, ನಾಲಿಗೆಯನ್ನು ಸೀಳಿಸಿ ಕನ್ನಡ ಮಾತಾಡ್‌ಬೇಡ ಎಂದು ಹೇಳಿದರೆ ಮೂಗ್ನಲ್ ಕನ್ನಡ ಪದವಾಡ್ತೀನಿ, ಅಂದರೆ ಮೂಗಿನಲ್ಲಾದರೂ ಸರಿ ನಾ ಕನ್ನಡವನ್ನೇ ಮಾತಾಡ್ತೀನಿ. ನನ್ನ ಮನಸ್ಸು ಎಷ್ಟು ಗಟ್ಟಿ ಅಂತ ದೇವರಾದ ನಿಂಗು ಗೊತ್ತಿಲ್ಲ. ಯೆಂಡ ಓಗ್ಲಿ ಬೇಕಾದ್ರೆ, ಯೆಡ್ತಿ ಓಗ್ಲಿ,

---

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೧೦೩.
೨. ಅದೇ, ಪುಟ. ೧೦೪.

ಎಲ್ಲವೂ ಕೊಚ್ಕೊಂಡ್ ಓಗ್ಲಿ, ಆದರೆ ಪ್ರಪಂಚ ಇರೋತನಕ ಕನ್ನಡ ಭಾಷೆ ಮುಂದೆ ಮುಂದೆ ಸಾಗಲಿ ಇದೇ ನನ್ನ ಆಶಯ ಎಂದು ರತ್ನಂ ವ್ಯಕ್ತಪಡಿಸುತ್ತಾರೆ.

ಒಟ್ಟಾರೆ ಜೀವನದಲ್ಲಿ ಎಲ್ಲವನ್ನು ಕಳೆದುಕೊಂಡಿರು ಪರವಾಗಿಲ್ಲ, ಕಳೆದುಕೊಂಡದ್ದನ್ನ ಮತ್ತೆ ಪಡೆಯಬಹುದು. ಆದರೆ ನನ್ನ ಭಾಷೆಯನ್ನು ನಾ ಬಿಟ್ಟರೆ ಅದು ನನಗೆ ನಾನೇ ಅವಮಾನ ಮಾಡಿಕೊಂಡಂತೆ. ಆದ್ದರಿಂದ ಈ ಪ್ರಪಂಚ ಇರೋತನಕ ಕರ್ನಾಟಕದಲ್ಲಿರುವವರು ಏನು ಕಳೆದುಕೊಂಡರೂ ಪರವಾಗಿಲ್ಲ. ಆದರೆ ನಮ್ಮ ನಾಡುನುಡಿ ಅದು ನಮ್ಮ ಮೂಲ ಆಸ್ತಿ, ಸರ್ವಸ್ವ ಅದನ್ನು ಎಂದಿಗೂ ಕಳೆದುಕೊಳ್ಳಬಾರದು ಎಂಬ ಆಶಯ ಇದೆ.

ನವೋದಯ ಕಾಲದ ಮತ್ತೊಬ್ಬ ಮುಖ್ಯ ಸಾಹಿತಿಯಾಗಿ ಕಾಣಿಸಿಕೊಳ್ಳುವವರು "ಬೆನಗಲ್ ರಾಮರಾವ್"ರವರು. ಇವರು ಕನ್ನಡದ ಹಿರಿಮೆಯನ್ನು ಈ ರೀತಿ ಕೊಂಡಾಡಿದ್ದಾರೆ. ಕನ್ನಡ ನಾಡು ಉದಯವಾಗಲು ಮುಖ್ಯ ಕಾರಣ. ಆಧಾರವೇ ಕನ್ನಡ ಭಾಷೆ. ಆದ್ದರಿಂದ ಕನ್ನಡನಾಡಿನ ತಾಯಿ ಕನ್ನಡ ಭಾಷೆ ಎಂಬುದನ್ನು ಸಾದರಪಡಿಸುತ್ತಾ, ಭೂಮಿಯಲ್ಲಿ ಇರುವ ಸೌಂದರ್ಯವೆಲ್ಲವೂ ಕನ್ನಡಾಂಬೆಯ ಸೊಗಸನ್ನು ಹೆಚ್ಚಿಸುತ್ತದೆ ಎಂಬುದನ್ನು ತಮ್ಮ "ಕನ್ನಡಾಂಬೆಯ ಹಿರಿಮೆ" ಎಂಬ ಕವನದಲ್ಲಿ ವ್ಯಕ್ತಪಡಿಸುತ್ತಾರೆ.

> "ಕನ್ನಡವನುಳಿದೆನಗೆ। ಅನ್ಯಜೀವನವಿಲ್ಲ
> ಕನ್ನಡವೆ ಎನ್ನುಸಿರು। ಪೆತ್ತೆನ್ನ ತಾಯ
> ಕನ್ನಡವೇ ಧನಧಾನ್ಯ। ಕನ್ನಡವೆ ಮನೆಮಾನ್ಯ
> ಕನ್ನಡವೆ ಯೆನಗಾಯ್ತು। ಕಣ್ಣು ಕಿವಿ ಬಾಯಿ."[೧]

ಕನ್ನಡ ನಾಡಿಗೆ ಕನ್ನಡ ಭಾಷೆಯನ್ನು ಬಿಟ್ಟರೆ ಬೇರೆ ಜೀವನವೇ ಇಲ್ಲ. ಕನ್ನಡವೇ ಉಸಿರು, ಕನ್ನಡವೇ ಕನ್ನಡನಾಡನ್ನು ಹೆತ್ತತಾಯಿ, ಕನ್ನಡವೇ ನಮಗೆ ಸಂಪತ್ತು ಆಹಾರ, ಕನ್ನಡವೇ ನಮಗೆ ಆಸರೆ ಕನ್ನಡವೇ ನನಗೆ ಕಣ್ಣು, ಕಿವಿ, ಬಾಯಿ, ಅಂದರೆ ಕನ್ನಡಾಂಬೆಗೆ ಸರ್ವಸ್ವವು ಕನ್ನಡವೇ. ಇಲ್ಲಿ ಗಮನಿಸಬೇಕಾದುದು ಕನ್ನಡಾಂಬೆಗೆ ಎಂದರೆ ಕನ್ನಡನಾಡಿನ ಜನತೆಗೆ ಕನ್ನಡವನ್ನು ಕಳೆದುಕೊಂಡರೆ ಸರ್ವಸ್ವವನ್ನು ಕಳೆದುಕೊಂಡಂತೆ. ನನಗೆ ಸರ್ವ ಇಂದ್ರೀಯಗಳು ಕನ್ನಡವಾಗಿರ–

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೭೨.

ಬೇಕು. ಏಕೆಂದರೆ ಕನ್ನಡ ಇರುವವರೆಗೆ ಮಾತ್ರ ಕನ್ನಡ ನಾಡು, ಅಂದರೆ ನಾವು, ನೀವು ಆದ್ದರಿಂದ ಕನ್ನಡವೇ ನಮಗೆ ಉಸಿರು.

ಕನ್ನಡದ ಸವಿಮಾತಿನಿಂದಲೇ ಭಾರತದಲ್ಲಿ ಕನ್ನಡ ನಾಡಿಗೂ ಮನ್ನಣೆ ದೊರೆತಿದೆ. ಕನ್ನಡದ ಸಾಹಿತ್ಯ ಸರಸ್ವತಿಯಿಂದಲೇ ನನಗೆ ಹೊಸ ಉಸಿರು, ಕನ್ನಡದ ಚರಿತೆಯೇ ನನಗೆ ಮಜ್ಜನ, ಕನ್ನಡದ ಸಂಪತ್ತು ನನಗೆ ನರುಗೆಂಪು ಕನ್ನಡಕ್ಕೆ ಗೌರವಿಸಿದರೆ, ನನಗೆ ಅದು ವರಮಾನ, ಅಂದರೆ ಕನ್ನಡವನ್ನು ಗೌರವಿಸಿದಷ್ಟು, ಕನ್ನಡನಾಡಿಗೆ ಲಾಭ. ಕನ್ನಡಿಗರಿಗೆ ಸ್ವತಂತ್ರ ಸಿಕ್ಕರೆ ನನಗೆ ಅದೇ ಪರಮಮಂತ್ರ, ಕನ್ನಡ ಭಾಷೆಗೆ ಕೀರ್ತಿ ಬಂದರೆ ನನ್ನ ಮನಸ್ಸಿಗೆ ಅದೇ ಸ್ಫೂರ್ತಿ, ಕನ್ನಡಿಗರು ಒಗ್ಗಟ್ಟಿನಿಂದ ಕೂಡಿ ಬಾಳಿದರೆ ನನಗೆ ಅಂದರೆ ಕನ್ನಡನಾಡಿಗೆ ಅದೇ ಕಿರೀಟ. ಅಂದರೆ ಕನ್ನಡ ಭಾಷೆಗೆ ಮನ್ನಣೆ ಗೌರವ ದೊರೆತರೆ ಅದು ಕನ್ನಡಾಂಬೆಗೆ, ಕನ್ನಡ ನಾಡಿಗೆ ದೊರೆತ ಸಮಾನ.

> "ಕನ್ನಡದ ಹೊಲಮಣ್ಣು। ಎನಗೆ ನವನಿಧಿ ಹೊನ್ನು
> ಕನ್ನಡದ ತಿಳಿಜಲವು। ಸುಧೆಯ ಪಲ್ಲವಲವು
> ಕನ್ನಡದ ಹೂಗಿಡವು। ಎನ್ನೊಡಲಿಗಿದೆ ತೊಡವು
> ಕನ್ನಡದ ಪಶುಪಕ್ಷಿ। ಚೆಲುವಿಗದೆ ಸಾಕ್ಷಿ"[೧]

ಕನ್ನಡದ ಹೊಲ ಮಣ್ಣು, ಕನ್ನಡಾಂಬೆಗೆ ನವರತ್ನ ದೊರಕುವ ಹೊನ್ನು. ಅಂದರೆ ಕನ್ನಡನಾಡಿನ ಮಣ್ಣು ಹೊನ್ನಿಗೆ ಸಮಾನ. ಕನ್ನಡನಾಡಿನಲ್ಲಿ ಹರಿಯುವ ನೀರು ಅಮೃತಕ್ಕೆ ಸಮಾನ, ಕನ್ನಡದ ಹೂಗಿಡಗಳು ಕನ್ನಡಾಂಬೆಯ ಶರೀರಕ್ಕೆ ಉಡುಗೆ, ಕನ್ನಡ ಪಶುಪಕ್ಷಿಗಳು, ಕನ್ನಡ ತಾಯಿಯ ಚೆಲುವಿಗೆ ಸಾಕ್ಷಿಯಾಗಿದೆ.

ಕನ್ನಡಿಗರಿಗೆ ಹೆಚ್ಚಾಗಿ ಭುವನೇಶ್ವರಿಯ ದಯೆಯಿದೆ. ಕನ್ನಡಿಗರ ಜಯಕ್ಕೆ ಕೃಷ್ಣನ ಕೃಪೆಯಿದೆ. ಕನ್ನಡದ ಕುಲಕೋಟಿ ಜನರು ಕನ್ನಡನಾಡಿಗೆ ತೋಳಿನ ಬಲದಂತೆ ಕನ್ನಡನಾಡಿಗೆ ಎಲ್ಲರಿಂದ ಮುಕ್ತಿ ದೊರೆಯಬೇಕಾದರೆ ಕನ್ನಡ ಜನತೆ ಒಂದುಗೂಡಬೇಕು. ಕನ್ನಡಾಂಬೆಯನ್ನು ಅನ್ಯರಿಂದ ಮುಕ್ತಿಗೊಳಿಸಿದರೆ ಕನ್ನಡನಾಡಿಗೆ ಶಕ್ತಿ ಬರುತ್ತದೆ. ಅದಕ್ಕಾಗಿ ಕನ್ನಡಾಂಬೆಯನ್ನು ಮುಕ್ತಿಗೊಳಿಸಬೇಕಾದರೆ ಅದು ಕನ್ನಡಿಗರ ಶಕ್ತಿಯಿಂದ ಮಾತ್ರ ಎಂಬುದಾಗಿ ಕವಿ ತಮ್ಮ ಆಶಯವನ್ನು ಈ ಕವಿತೆ ಮುಖಾಂತರ ವ್ಯಕ್ತಪಡಿಸುತ್ತಾರೆ.

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೭೨.

ನವೋದಯ ಕಾಲದ ಮತ್ತೊಬ್ಬ ಶ್ರೇಷ್ಠ ಕವಿ 'ಶಾಂತಕವಿ' ಕನ್ನಡ ಶ್ರೇಷ್ಠವಾದ ಭಾಷೆ. ಅಂತಹ ಭಾಷೆಯನ್ನಾಡುವ ನಾಡಿನಲ್ಲಿ ಹುಟ್ಟಿರುವ ನಾವೇ ಧನ್ಯರು ಎಂದು ಹೇಳುತ್ತ ಅವರು 'ಕನ್ನಡ ದಾಸಯ್ಯ' ಎಂಬ ಕವಿತೆಯಲ್ಲಿ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸುತ್ತಾರೆ. ಇಲ್ಲಿ ದಾಸಯ್ಯ ಎಂದ ಕೂಡಲೇ ಅವನು ಅನ್ನಕ್ಕಾಗಿ ಭಿಕ್ಷೆ ಬಂದಿರುವ ದಾಸನಲ್ಲ. ಇವನು ಕನ್ನಡದ ದಾಸಯ್ಯ ಕನ್ನಡವನ್ನು ಎತ್ತಿಹಿಡಿದು ಉಳಿಸಿ ಎಂದು ಬೇಡಿಕೊಳ್ಳಲು ಬಂದಿರುವವನು.

"ಬೇಡಲು ಕನ್ನಡ ದಾಸಯ್ಯ ಬಂದಿಹ
ನೀಡಿರಮ್ಮಾ! ತಡಮಾಡದಲೇ"[೧]

ಕನ್ನಡದ ದಾಸಯ್ಯ ನಿಮ್ಮನ್ನು ಬೇಡಲು ಬಂದಿಹನು ಅವನಿಗೆ ತಡಮಾಡದೆ ನೀಡಿ, ಆತ ಹಾಡೊಂದನು ಹೊಸದಾಗಿ ಹೇಳುತಿಹನು ಅದನ್ನು ಕೂಡಿಕೊಂಡು ಒಟ್ಟಾಗಿ ಕನ್ನಡಿಗರು ಕೇಳಿ

"ಕನ್ನಡ ಮಾಡತಿನ ತಂದೆತಾಯಿಗಳಿಂದ
ಚೆನ್ನಚೆನ್ನೆಯರೆಲ್ಲ ಹುಟ್ಟಿದಿರಿ
ಕನ್ನಡ ಮಾತಿನ ಜೋಗುಳವನು ಕೇಳಿ
ಕನ್ನಡ ತೊಟ್ಟಿಲೊಳಾಡಿದರಿ"[೨]

ಕನ್ನಡ ಭಾಷೆಯನ್ನಾಡುವ ತಂದೆತಾಯಿಗಳಿಂದ ಚೆನ್ನ, ಚೆನ್ನೆಯರು ಹುಟ್ಟಿದಿರಿ. ಅಂದರೆ ಕನ್ನಡ ತಂದೆತಾಯಿಗಳಿಗೆ ಮಕ್ಕಳಾಗಿ ಹುಟ್ಟಿದಿರಿ. ಕನ್ನಡನುಡಿಯ ಜೋಗುಳದಿಂದ ಹಾಡನ್ನು ಕೇಳಿಕೊಂಡು ಬೆಳೆದು ಕನ್ನಡ ನಾಡಿನ ತೊಟ್ಟಿಲೊಳಗೆ ಆಡಿದ್ದೀರ, ಕನ್ನಡ ದೇಶದೊಳಗೆ ದೊಡ್ಡವರಾಗಿದ್ದೀರ, ಕನ್ನಡದಲ್ಲಿ ವಿದ್ಯಾಭ್ಯಾಸ ಮಾಡಿ ಬುದ್ಧಿವಂತರಾಗಿದ್ದೀರ, ಕನ್ನಡದಿಂದಲೇ ಕನ್ನಡನಾಡಿನಲ್ಲಿ ಸಿರಿವಂತರಾಗಿದ್ದೀರ, ಕನ್ನಡ ದೇಶದಲ್ಲಿಯೇ ಹೆಸರನ್ನು ಕೀರ್ತಿಯನ್ನು ಗಳಿಸಿದ್ದೀರ. ಆದ್ದರಿಂದ ಕನ್ನಡವನ್ನು ಮರೆಯಬೇಡಿ. ಕನ್ನಡದ ಹೊನ್ನು ಅಂದರೆ ಉನ್ನತಿಕೆಯನ್ನು ತರಲು ಬೇಡಿಕೊಂಡು ಬಂದಿಹೆನು.

"ಅನ್ಯ ಭಾಷೆಗಳಂತೆ ಕನ್ನಡ ಭಾಷೆಗೆ

---

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೧೪೨.
೨. ಅದೇ.,

ಉನ್ನತಿಕೆಯ ತರಬೇಕೆಂದು
ಹೊನ್ನು ಕೂಡಿಸಲಿಕ್ಕೆ ಬಂದಿಹನಾತನ್ನು
ಮನ್ನಿಸಿ ಹಣವನ್ನು ಕೊಡಿರಮ್ಮ"[೧]

ಕನ್ನಡ ಬಿಟ್ಟು ಅನ್ಯಭಾಷೆಗಳು ಇಂದು ಉನ್ನತಮಟ್ಟವನ್ನು ತಲುಪಿವೆ. ಆದ್ದರಿಂದ ನಮ್ಮ ಭಾಷೆಯು ಅದಕ್ಕೆ ಸರಿಸಾಟಿಯಾಗಿ ನಿಲ್ಲಬೇಕು. ಅದಕ್ಕಾಗಿ ಆರ್ಥಿಕವಾಗಿ ನಾವು ಸದೃಢವಾಗಬೇಕು. ಆದ್ದರಿಂದ ಮನ್ನಿಸಿ ಹಣವನ್ನು ಕೊಡಿ ಎಂದು ಬೇಡಿಕೊಳ್ಳುತ್ತ, ನಾನು ಹೊಟ್ಟೆಗಿಲ್ಲದೆ ಬಂದ ದಾಸಯ್ಯನಲ್ಲ, ಕೊಟ್ಟುದುದನ್ನು ಬಿಟ್ಟು ಹೋಗುವವನಲ್ಲ. ಅಂದರೆ ಈಗ ಕನ್ನಡನಾಡಿನಲ್ಲಿ ನನಗೊಂದು ಸ್ಥಾನವಿದೆ. ಅದನ್ನು ಬಿಟ್ಟು ನಾನು ಹೋಗುವುದು ಇಲ್ಲ. ನನ್ನನ್ನು ಕಾಪಾಡಲು ಅಭಿವೃದ್ಧಿಪಡಿಸಲು ಬಂದ ಕೈಗಳನ್ನು ದಿಟ್ಟಿಸಿ ನೋಡುತ್ತಾ ಅಲ್ಲೇ ಕನ್ನಡದ ಪದಗಳನ್ನು ಕಟ್ಟುವವನು.

ಕನ್ನಡಕ್ಕೆ ಮರ್ಯಾದೆ ಕೊಟ್ಟರೆ ಹಿಗ್ಗುವ, ಕೊಡದಿದ್ದರೆ ಕುಗ್ಗುವ ಕೆಟ್ಟ ಮನಸ್ಸು ನನಗಿಲ್ಲ, ನೀವು ಆಡುವ ಮಾತು ಕನ್ನಡ ನಿಘಂಟೆಂಬ ಹೆಡಿಗೆಗೆ ತುಂಬುತ್ತವೆ. ಅಲ್ಲಿ ಇರುವಂತಹ ಶಬ್ದ ನಿಧಿ ನಿಮಗೆ ಕೊಡಲಾಗುವುದಿಲ್ಲ. ಕಾಸಿಗೆ ಅದನ್ನು ಕೊಡಲಾಗದು, ಅದು ನೀವು ಮನಸ್ಸಿಂದ ಆಡುವ ಮಾತಿಗೆ ಬೆಲೆಯಿದೆ. ಒಂದೊಂದು ಕಾಸು ಸೇರಿದರೆ ಅದು ಕೋಟಿಗೆ ಮೂಲವಾಗುತ್ತದೆ. ಹಾಗೆಯೇ ಕನ್ನಡ ಮಾತನಾಡುವ ಒಬ್ಬೊಬ್ಬರಿಂದಲೇ ಕೋಟಿಗಟ್ಟಲೆ ಕನ್ನಡಿಗರು ಜನಿಸುತ್ತಾರೆ ಎಂಬುದಾಗಿ ಶಾಂತಕವಿ ಹೇಳಲು, ಕನ್ನಡಿಗರು ಕನ್ನಡಕ್ಕೆ ಬೆಲೆ ಕೊಡಬೇಕು ಎಂದು ಅಭಿಪ್ರಾಯಪಡುತ್ತಾರೆ.

ಒಟ್ಟಾರೆ ಕನ್ನಡನಾಡಿನಲ್ಲಿ ಕನ್ನಡಕ್ಕೆ ಕನ್ನಡಿಗರು ಬೆಲೆಕೊಡಬೇಕು ಎಂಬುದಾಗಿ ಹೇಳುತ್ತಾ ಕನ್ನಡಿಗರು ಕನ್ನಡಕ್ಕಾಗಿ ಹೋರಾಟ ಮಾಡಬೇಕು. ಆದ್ದರಿಂದ ಕನ್ನಡವನ್ನು ಉಳಿಸಿ, ಬೆಳಸಿ ಎಂದು ಬೇಡುವಂತೆ ಕನ್ನಡದ ದಾಸಯ್ಯ ಎಂಬ ಪ್ರತಿಮೆಯನ್ನು ನೀಡುತ್ತಾ ಕವಿ ಅಭಿವ್ಯಕ್ತಿಸಿದ್ದಾರೆ.

ಹಿಂದಿನ ಅಧ್ಯಾಯದಲ್ಲಿ ಹೇಳಿರುವಂತೆ ನವೋದಯ ಕಾಲದ ಶ್ರೇಷ್ಠ ಕವಿ "ಕುವೆಂಪು" ಇವರು ಕನ್ನಡದ ನಾಡಿನ ಬಗ್ಗೆ ಮಾತ್ರವಲ್ಲದೆ ನುಡಿಯ ಶ್ರೇಷ್ಠತೆಯನ್ನು ಎತ್ತಿಹಿಡಿದಿದ್ದಾರೆ. ಕನ್ನಡ ನುಡಿ ಸವಿಯಾದುದು, ಸೊಗಸಾದುದು ಎಂಬುದನ್ನು ಅವರ "ಕನ್ನಡದ ಕಂದ" ಕವಿತೆಯಲ್ಲಿ ಕಾಣಬಹುದು.

---

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೧೪೨.

"ಕನ್ನಡಕ್ಕೆ ಹೋರಾಡು ಕನ್ನಡದ ಕಂದ
ಕನ್ನಡವ ಕಾಪಾಡು ನನ್ನ ಆನಂದ"[೧]

ಕುವೆಂಪು ಅವರು ಹೇಳುವಂತೆ ಕನ್ನಡದ ಮಕ್ಕಳೆಲ್ಲ ಕನ್ನಡಕ್ಕಾಗಿ ಹೋರಾಟಮಾಡಬೇಕು. ಕನ್ನಡದ ರಕ್ಷಣೆಯನ್ನು ಸಂತೋಷದಿಂದ ಒಪ್ಪಿಕೊಳ್ಳಬೇಕು. ಆಗ ಮಾತ್ರ ನಮಗೆ ಆನಂದವಾಗುತ್ತದೆ. ಇದು ಒಬ್ಬ ತಾಯಿಯ ಹರಕೆ, ಇದನ್ನು ಮರೆತರೆ ಹೆತ್ತತಾಯಿಯನ್ನು ಮರೆತಂತೆ ಅಂದರೆ ತಮ್ಮ ಮಾತೃಭಾಷೆಯ ಕನ್ನಡವನ್ನು ಮರೆತರೆ ಹೆತ್ತತಾಯಿಯನ್ನೇ ಮರೆತಂತಾಗುತ್ತದೆ.

"ಮೊಲೆಯ ಹಾಲೆಂತ ಸವಿಜೇನು ಬಾಯ್ಗೆ
ತಾಯಿಯಪ್ಪುಗೆಯಂತೆ ಬಲುಸೊಗಸು ಮೈಗೆ
ಗುರುವಿನೊಳ್ನುಡಿಯಂತೆ ಶ್ರೇಯಸ್ಸು ಬಾಳ್ಗೆ
ತಾಯ್ನಾಡಿಗೆ ದುಡಿದು ಮಡಿ ಇಹ ಪರಗಳೇಳ್ಗೆ"[೨]

ಕನ್ನಡ ನುಡಿ ತಾಯಿಯ ಹಾಲಂತೆ ಮಾತಾಡುತ್ತಿದ್ದರೆ ಸವಿಜೇನು, ತಾಯಿ ತನ್ನ ಮಗುವನ್ನು ಅಪ್ಪಿಕೊಂಡಾಗ ಮೈಗೆ ಆಗುವ ಸೊಗಸು, ಗುರುವಿನ ಒಳ್ಳೆಯ ಮಾತಿನಂತೆ ಬಾಳಿಗೆ ಶ್ರೇಯಸ್ಸು, ತಾಯ್ನಾಡಿಗಾಗಿ, ತಾಯಿ ನುಡಿಗಾಗಿ ಸತ್ತರು ಆತ ಸ್ವರ್ಗಕ್ಕೆ ಸೇರುತ್ತಾನೆ. ಆದ್ದರಿಂದ ಹೆತ್ತತಾಯಿಯಂತೆ ತಾಯಿನಾಡು, ತಾಯಿ ಭಾಷೆ ಶ್ರೇಷ್ಠವಾದುದು. ಅಂತಹ ಶ್ರೇಷ್ಠವಾದ ಕನ್ನಡ ಭಾಷೆಯನ್ನು ಎಂದಿಗೂ ಮರೆಯಬೇಡ. ಅದರ ಶ್ರೇಯಸ್ಸೆ ಕನ್ನಡಿಗರ ಶ್ರೇಯಸ್ಸು, ಕನ್ನಡದ ಏಳಿಗೆಯೇ ಕನ್ನಡಿಗರ ಏಳಿಗೆ, ಅದು ಹಾಲಿನಷ್ಟೇ ಪವಿತ್ರವಾದುದು ಮತ್ತು ಮಧುರವಾದುದು ಎಂದು ಅಭಿವ್ಯಕ್ತಿಸಿದ್ದಾರೆ.

"ರನ್ನ ಪಂಪರನಚ್ಚು ಕನ್ನಡದ ಸೊಲ್ಲು
ಬಸವದೇವನ ಮೆಚ್ಚು ಹರಿಹರನ ಗೆಲ್ಲು
ನಾರಣಪ್ಪನ ಕೆಚ್ಚು ಬತ್ತಳಿಕೆ ಬಿಲ್ಲು
ಕನ್ನಡವ ಕೊಲ್ಲುವ ಮುನ್ನ ಓ ನನ್ನ ಕೊಲ್ಲು"[೩]

ಕನ್ನಡ ಭಾಷೆ ಕವಿಗಳಿಗೆ ಶ್ರೇಷ್ಠವಾದ ಭಾಷೆ. ಕನ್ನಡ ಭಾಷೆಯಲ್ಲಿ ಮಾಡಿರುವಷ್ಟು ಶ್ರೇಷ್ಠವಾದ ಕಾವ್ಯ ಮಹಾಕಾವ್ಯಗಳು ಮತ್ತಾವ ಭಾಷೆಯಲ್ಲಿಯೂ

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೩೩.

೨. ಅದೇ.,

೩. ಅದೇ.,

ಕಂಡುಬಂದಿಲ್ಲ. ರನ್ನ, ಪಂಪರು ಮೆಚ್ಚಿ ಕಾವ್ಯಗಳನ್ನು ರಚಿಸಿದ ಭಾಷೆ ಕನ್ನಡ. ಬಸವೇಶ್ವರರು ತಮ್ಮ ವಚನಗಳನ್ನು ಕನ್ನಡದ ಮೂಲಕ ಸಾರುತ್ತ ತಿಳುವಳಿಕೆ ಮೂಡಿಸಿದರು. ಕುಮಾರವ್ಯಾಸ ಭಾರತ ಬರೆದ ನಾರಾಣಪ್ಪ ವೀರತನವನ್ನು ಭಕ್ತಿಯನ್ನು ಮೆರೆದ ಭಾಷೆ. ಕನ್ನಡ ನಾಶವಾಗುವ ಮೊದಲು ನನ್ನನ್ನು ಕೊಲ್ಲು ಎಂದು ಹೇಳುತ್ತ, ಕನ್ನಡ ಜೀವದ್ಭಾಷೆ, ಎಂಥವರನ್ನು ಸೆಳೆಯುವ ಶಕ್ತಿ ಕನ್ನಡಕ್ಕೆ ಇದೆ. ತಮ್ಮ ಭಾವನೆಗಳನ್ನು ಹೆಚ್ಚಾಗಿ ಅಭಿವ್ಯಕ್ತಿಸಲು ಅವಕಾಶವಿರುವುದು ಕನ್ನಡದಲ್ಲಿಯೇ. ಆದ್ದರಿಂದ ಅತ್ಯಂತ ದೊಡ್ಡ ದೊಡ್ಡ ಕವಿಗಳು ಸಾಹಿತ್ಯ ರಚನೆ ಮಾಡಿರುವುದು ಕನ್ನಡದಲ್ಲಿಯೇ ಅಂತಹ ಶ್ರೇಷ್ಠವಾದ ಭಾಷೆಯನ್ನು ಉಳಿಸಿ ಬೆಳೆಸಿಕೊಂಡು ಸಾಗಬೇಕು. ಅದಕ್ಕಾಗಿ ಹೋರಾಡಿ ಮಡಿ. ಅದರಿಂದ ನಿನಗೆ ಮುಕ್ತಿ ದೊರೆಯುತ್ತದೆ ಎಂಬುದಾಗಿ ಹೇಳಿದ್ದಾರೆ.

ಕೆ.ಎಸ್.ನಿಸಾರ್ ಅಹಮದ್‌ರವರು ಕನ್ನಡ ನುಡಿಯ ಹಿರಿಮೆಯನ್ನು ವ್ಯಕ್ತಪಡಿಸುತ್ತ 'ಕನ್ನಡವೆಂದರೆ ಬರಿ ನುಡಿಯಲ್ಲ' ಎಂಬ ಕವನದಲ್ಲಿ ಕನ್ನಡ ಬರಿ ನುಡಿಯಲ್ಲ. ಅದರ ಹಿಂದೆ ಹಿರಿದಾದ ಅರ್ಥವಿದೆ. ಅದಕ್ಕೆ ತನ್ನದೆ ಆದ ಹಿರಿಮೆ, ಗೌರವ, ಅಭಿಮಾನವಿದೆ ಎಂಬುದನ್ನು ಈ ಕವನದಲ್ಲಿ ಅಭಿವ್ಯಕ್ತಿಸಿದ್ದಾರೆ.

> "ಕನ್ನಡವೆಂದರೆ ಬರಿ ನುಡಿಯಲ್ಲ, ಹಿರಿದಿದೆ ಅದರರ್ಥ
> ಜಲವೆಂದರೆ ಕೇವಲ ನೀರಲ್ಲ, ಅದು ಪಾವನ ತೀರ್ಥ."[೧]

ಕನ್ನಡ ನುಡಿ ಕೇವಲ ಒಂದು ಭಾಷೆ ಮಾತ್ರವಲ್ಲ. ಅದರೊಳಗೆ ಹಿರಿದಾದ ಅರ್ಥವಿದೆ. ಅದಕ್ಕೆ ತನ್ನದೇ ಆದ ಇತಿಹಾಸವಿದೆ. ಅದರೊಳಗೆ ಸಂಸ್ಕೃತಿ ಇದೆ. ಜೀವನದ ರೀತಿನೀತಿಗಳಿವೆ. ಆದ್ದರಿಂದ ಕನ್ನಡಕ್ಕೆ ತನ್ನದೇ ಆದ ಗೌರವವಿದೆ. ಹಾಗೆ ಜಲ ಎಂದರೆ ಕೇವಲ ನೀರಲ್ಲ. ಅದು ನಮ್ಮನ್ನು ಶುದ್ಧಿಗೊಳಿಸುವ ಪಾವನ ತೀರ್ಥ. ಕರ್ನಾಟಕದ ಕಾವೇರಿ ನೀರಿಗೆ ದೈವತ್ವದ ಸ್ಥಾನವನ್ನು ನೀಡಿದ್ದೇವೆ. ಕನ್ನಡವೆಂದರೆ ಬರಿ ನಾಡಲ್ಲ ಅದು ನಮ್ಮ ಭೂಪಟದಲ್ಲಿಯೇ ಸಂಪತ್ತಿಗೆ ಒಂದು ಹೆಗ್ಗುರುತು. ಅಲ್ಲಿರುವ ಮರಗಳು ಕೇವಲ ಸೌದೆಗಳಲ್ಲ. ಅದು ಶ್ರೀಗಂಧದ ಮರ ಕರ್ನಾಟಕದಲ್ಲಿರುವ ವಸ್ತುಗಳಿಗೆಲ್ಲ ಅದರದ್ದೇ ಆದ ಬೆಲೆಯಿದೆ.

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೩೯.

"ಕನ್ನಡ ಬರಿ ಕರ್ನಾಟಕವಲ್ಲ – ಅಸೀಮ ಅದು ಅದಿಗಂತ;
ದೇವರು ಕೇವಲ ವಿಗ್ರಹವಲ್ಲ, ಅಂತರ್ಭಾವ ಅನಂತ"[೧]

ಕನ್ನಡ ಕೇವಲ ಕರ್ನಾಟಕದಲ್ಲಿ ಮಾತ್ರವಲ್ಲ. ಅದಕ್ಕೆ ಕೊನೆ ಎಂಬುದೇ ಇಲ್ಲ. ಅದು ಅದಿಗಂತ. ದೇವರು ಎಂದರೆ ಕೇವಲ ಕಲ್ಲಿನ ರೂಪದಲ್ಲಿ ಗುಡಿಯೊಳಗಿರುವ ವಿಗ್ರಹವಲ್ಲ. ಅದು ಮನಸ್ಸಿನ ಅಂತರಾಳದಲ್ಲಿ ಅಡಗಿರುವ ಅವಿರ್ಭಾವದ ಒಂದು ಸಂಬಂಧ. ಅಂದರೆ ದೇವರು ಎಂಬ ಭಾವನೆ, ಭಕ್ತಿ, ನಮ್ಮ ಮನಸ್ಸಿಗೆ ಸಂಬಂಧಿಸಿದ್ದು ಅದು ಕನ್ನಡಿಗರಲ್ಲಿ ಯಥೇಚ್ಛವಾಗಿದೆ. ಕನ್ನಡ ಎಂದರೆ ಕೇವಲ ಜನಸಂಖ್ಯೆಯಿಂದ ತುಂಬಿರುವ ಪ್ರದೇಶವಲ್ಲ, ಅಲ್ಲಿ ಪ್ರತಿಯೊಬ್ಬರು ಹೇಗೆ ತಮ್ಮ ಜೀವನವನ್ನು ನಡೆಸಬೇಕು, ಎಂಬುದನ್ನು ತಿಳಿಸುವ ಶಾಲೆ ಕರ್ನಾಟಕ. ಅಲ್ಲಿ ಬೀಸುವ ಗಾಳಿ ಕೇವಲ ಹವೆಯಲ್ಲ. ಅದು ಅಲ್ಲಿನ ಜನರು ಉಸಿರಾಡುವ ಪಂಚಪ್ರಾಣ. ಕನ್ನಡ ಕೇವಲ ಚಂದ್ರನಲ್ಲ. ಅದು ಏಳು ಬಣ್ಣಗಳನ್ನು ಬೀರುವ ಕಾಮನಬಿಲ್ಲು. ಕನ್ನಡ ಮತ್ತು ಕರ್ನಾಟಕ ಸೂರ್ಯ, ಚಂದ್ರ, ನಕ್ಷತ್ರಗಳು ಇರುವವರೆಗೂ ಬೆಳಗುವ ಜ್ಯೋತಿಯದು. ಸರಸ್ವತಿಯ ಕೈಯಲ್ಲಿ ಮೀಟುವ ವೀಣೆಯ ದನಿಯದು. ಆದ್ದರಿಂದ ಕನ್ನಡನಾಡು ಮತ್ತು ನುಡಿ ಶ್ರೇಷ್ಠವಾದುದು.

ಕನ್ನಡ ರಾಜೇಶ್ವರಿ ಶ್ರೇಷ್ಠವಾದುದು, ಅವಳಿಗೆ ಎಷ್ಟು ಜಯಕಾರ ಹಾಕಿದರು ಸಾಲದು ಎಂಬುದನ್ನು 'ಎನ್.ಎಸ್.ಲಕ್ಷ್ಮಿನಾರಾಯಣಭಟ್ಟರು' ಈ ರೀತಿ ಅಭಿವ್ಯಕ್ತಿಸಿದ್ದಾರೆ.

"ಪಂಪನ ನುಡಿ ಮಿಂಚಿನ ಮಣಿ ಜ್ವಾಲೆಗೆ
ನಾರಾಣಪ್ಪ ಕಡೆದ ಭಾವಜ್ವಾಲೆಗೆ
ಶಿಲೆಯು ಅರಳಿ ನಗುವ ಕಲೆಯ ಲೀಲೆಗೆ
ಸಮ ಯಾವುದೇ ತಾಯಿ ನಿನ್ನ ಚೆಲುವಿಗೆ"[೨]

ಕನ್ನಡ ನುಡಿ ಅತಿ ಶ್ರೇಷ್ಠವಾದ ಭಾಷೆ. ಅದು ಶ್ರೇಷ್ಠ ಕವಿಗಳಿಂದ ಮತ್ತಷ್ಟು ತನ್ನ ಸೌಂದರ್ಯವನ್ನು ಹೆಚ್ಚಿಸಿಕೊಂಡಿದೆ. ನವರಸಗಳನ್ನು ಅಭಿವ್ಯಕ್ತಿಸುವ ಸಾಮರ್ಥ್ಯ ಕನ್ನಡ ನುಡಿಗಿದೆ. ಪಂಪನ ಕಾವ್ಯಗಳಲ್ಲಿ ಶಬ್ಧಕ್ಕೆ ಬೆಂಕಿಯ ಶಕ್ತಿಯಿದೆ. ನಾರಣಪ್ಪನ ಕಾವ್ಯದಲ್ಲಿ ಭಾಷೆಗೆ ಭಾವನೆಗಳ ಜ್ವಾಲೆಯಿದೆ. ಒಂದು ಕಲ್ಲು ಕೂಡ ತನ್ನ ರೂಪವನ್ನು

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೩೯.

೨. ಅದೇ, ಪುಟ. ೪೪.

ಕಳೆದುಕೊಂಡು ಒಂದು ಸುಂದರ ಶಿಲ್ಪಾಕೃತಿಯಾಗುತ್ತದೆ. ಹಾಗೆ ಕನ್ನಡ ನುಡಿಯು ಇಂತಹ ಶ್ರೇಷ್ಠ ಕವಿಗಳಿಂದ ತನ್ನ ಸೌಂದರ್ಯವನ್ನು ಹೆಚ್ಚಿಸಿಕೊಂಡಿದೆ.

> "ಶಂಕರ ರಾಮಾನುಜರಲ್ಲಿ ಸುಳಿಯುತ
> ಮಧ್ವರ ನವಚಿಂತನದಲಿ ಬೆಳೆಯುತ
> ಬಸವಣ್ಣನ ನೀತಿಗೆ, ಅಲ್ಲಮಪ್ರಭು ಪ್ರೀತಿಗೆ
> ನಮೋ ಎನುವೆ ದರ್ಶನಗಳ ಜ್ಯೋತಿಗೆ"[೧]

ಶಂಕರಾಚಾರ್ಯರು, ರಾಮಾನುಜಾಚಾರ್ಯರ ನೀತಿಬೋಧನೆಗಳನ್ನು ಜನರಿಗೆ ಮುಟ್ಟಿಸಿದ್ದು ಕನ್ನಡದಲ್ಲಿ ಮಧ್ವಚಾರ್ಯರ ಹೊಸ ಚಿಂತನೆಯಲ್ಲಿ ಕನ್ನಡ ಬೆಳೆಯಿತು. ಬಸವಣ್ಣನು ಬೋಧಿಸಿದ ನೀತಿ ಅಲ್ಲಮಪ್ರಭು ತೋರಿಸಿದ ಪ್ರೀತಿ, ಎಲ್ಲವೂ ಕನ್ನಡದ ತಾಯಿಗೆ ಬೆಳಗುವ ದೀಪಗಳು.

ಒಟ್ಟಾರೆಯಾಗಿ ಕನ್ನಡ ಪಂಪನ ಕಾಲದಿಂದ ಕುವೆಂಪುರವರ ಕಾಲದವರೆಗೂ ಕನ್ನಡ ವೈಭವಯುತವಾಗಿ ಬೆಳೆದಿದೆ ಎಂಬುದನ್ನು ನಾವು ಸಾಧಾರಪೂರ್ವಕವಾಗಿ ಗಮನಿಸಬಹುದು.

ಕನ್ನಡದ ನುಡಿಕೀರ್ತಿಯನ್ನು ಹೆಚ್ಚಿಸಿದ ಕೀರ್ತಿ ಡಿ.ಎಸ್.ಕರ್ಕಿಯವರಿಗೆ ಸಲ್ಲುತ್ತದೆ. ಅವರ 'ಹಚ್ಚೇವು ಕನ್ನಡದ ದೀಪ' ಕವನದಲ್ಲಿ ಕನ್ನಡ ನುಡಿಗಾಗಿ ನಾವು ಹೋರಾಟ ಮಾಡುತ್ತೇವೆ. ಕನ್ನಡಕ್ಕಾಗಿ ನಮ್ಮ ಪ್ರಾಣವನ್ನು ಕೊಟ್ಟು ನಮ್ಮ ನರನರಗಳನ್ನೇ ಹೊಸೆದು ದೀಪವನ್ನಾಗಿ ಮಾಡಿ ಕನ್ನಡದ ದೀಪವನ್ನು ಹಚ್ಚುತ್ತೇವೆ ಎಂಬುದಾಗಿ ತಮ್ಮ ದಿಟ್ಟನುಡಿಗಳಿಂದ ಅಭಿವ್ಯಕ್ತಿಸಿದ್ದಾರೆ.

> "ಹಚ್ಚೇವು ಕನ್ನಡದ ದೀಪ
> ಕರುನಾಡ ದೀಪ, ಸಿರಿನುಡಿಯ ದೀಪ
> ಬಲವೆತ್ತಿ ತೋರುವ ದೀಪ"[೨]

ಕನ್ನಡ ನಾಡಿನ ಜನರೆಲ್ಲರೂ ಒಟ್ಟಾಗಿ ಸೇರಿ ಕನ್ನಡದ ದೀಪವನ್ನು, ಕರುನಾಡ ದೀಪವನ್ನು, ಶ್ರೀಮಂತ ನುಡಿಯ ದೀಪವನ್ನು ಹಚ್ಚಿ. ನಮ್ಮ ಭಾಷೆ ಎಲ್ಲಾ ಕಡೆ ತಲೆ ಎತ್ತುವಂತೆ ಎತ್ತಿಹಿಡಿಯಬೇಕು.

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೪೪.

೨. ಅದೇ, ಪುಟ. ೫೩.

"ಬಹುದಿನಗಳಿಂದ ಮೈಮರವೆಯಿಂದ
ಕೂಡಿರುವ ಕೊಳೆಯ ಕೊಚ್ಚೇವು
ಎಲ್ಲೆಲ್ಲಿ ಕನ್ನಡದ ಕಂಪು ಸೂಸ
ಲಲ್ಲಲಿ ಕರಣ ಚಾಚೇವು
ಕನ್ನಡದ ಕಳೆಯ ಕೆಚ್ಚೇವು"[೧]

ತುಂಬ ದಿನಗಳಿಂದ ನಾವು ಕನ್ನಡದ ಬಗೆಗಿನ ನಿರ್ಲಕ್ಷತೆಯಿಂದ ಬೇರೆ ಭಾಷೆಗಳ ಪ್ರಭಾವದಿಂದ ತನ್ನತನವನ್ನು ಕಳೆದುಕೊಂಡಿದೆ. ಅದನ್ನು ಮತ್ತೆ ನಾವು ಎತ್ತಿಹಿಡಿಯಬೇಕು. ಕನ್ನಡ ಭಾಷೆಯಾಡುವ ಕಡೆಯಲೆಲ್ಲಾ ಅದರ ಕೀರ್ತಿಯನ್ನು ಹೆಚ್ಚಿಸಬೇಕು. ಕನ್ನಡದ ಬಳಕೆಗೆ ಮತ್ತು ಕನ್ನಡದ ಗಡಿಭಾಗಗಳಲ್ಲಿ ಕನ್ನಡದ ಕೀರ್ತಿಯನ್ನು ಎತ್ತಿಹಿಡಿಯಬೇಕು. ನಮ್ಮ ಮನಸ್ಸನ್ನು ತೆರೆದು ಒಲವಿನಿಂದ ನಮ್ಮ ನರನರಗಳನ್ನೇ ದಾರವನ್ನಾಗಿ ಮಾಡಿಕೊಂಡು ಹೊಸೆದು ಬತ್ತಿಯನ್ನು ಮಾಡಿಕೊಂಡು ಕನ್ನಡ ದೀಪವನ್ನು ಹಚ್ಚಬೇಕು. ಹಚ್ಚಿರುವ ಕನ್ನಡದ ದೀಪದಿಂದ ಕನ್ನಡ ತಾಯಿಯ ರೂಪ ಅಳಿಯದಂತೆ ನೋಡಿಕೊಳ್ಳುತ್ತೇವೆ ಎಂದು ಪ್ರಮಾಣಮಾಡಬೇಕು. ನಮ್ಮ ನಾಡಿಗೆ ಕೇಡನ್ನು ಬಯಸುವವರನ್ನು ನಮ್ಮ ಗಡಿಯಿಂದ ಆಚೆ ಓಡಿಸುತ್ತೇವೆ. ನಮ್ಮಲ್ಲಿ ನಮ್ಮ ಭಾಷೆಯ ಬಗ್ಗೆ ಪ್ರೀತಿ ಇದ್ದರೆ ನಮಗೆ ಭಯವೇಕೆ ನಾಡಿನ ಪ್ರೀತಿಯೇ ನಿಜವಾದ ನೀತಿ. ಮನೆಮನೆಗಳಲ್ಲಿ, ಮನೆಗಳಲ್ಲಿರುವ ಮನಸ್ಸುಗಳಲ್ಲಿ ಕನ್ನಡದ ದೀಪವನ್ನು ಹಚ್ಚಬೇಕು. ನಮ್ಮವರು ನಮ್ಮ ನಾಡು ನುಡಿಯ ಬಗ್ಗೆ ಉಳಿಸಿರುವ ಹೆಸರನ್ನು ಉಳಿಸುವುದಕ್ಕಾಗಿ ಎಲ್ಲರೂ ಒಂದು ಗೂಡುತ್ತೇವೆ. ನಮ್ಮ ನುಡಿಯಿಂದ ನಮ್ಮ ತಾಯಿಗೆ ಪೂಜೆ ಮಾಡಬೇಕು. ನಾವು ಉಸಿರಾಡುವ ಈ ನಾಡಿನಲ್ಲಿ ಮಂಗಳಕರವಾದ ಗೀತೆಯನ್ನು ಹಾಡುವಂತೆ ಮಾಡಿ, ಕನ್ನಡದ ದೀಪವನ್ನು ಹಚ್ಚಿ, ಕನ್ನಡನಾಡನ್ನು ಬೆಳಗುವಂತೆ ಮಾಡಬೇಕು ಎಂಬುದಾಗಿ ಡಿ.ಎಸ್.ಕರ್ಕಿಯವರು ಆಶಯ ವ್ಯಕ್ತಪಡಿಸಿದ್ದಾರೆ.

ಕನ್ನಡದ ಶ್ರೇಷ್ಠ ಕವಿಗಳಲ್ಲಿ "ಪು.ತಿ.ನರಸಿಂಹಾಚಾರ್"ರವರು ಒಬ್ಬರು. ಇವರು ಇಂದಿನ ಆಂಗ್ಲ ಭಾಷೆಯ ಧಾಳಿಯಿಂದ ತತ್ತರಿಸಿ, ಕನ್ನಡವನ್ನು ಉಳಿಸಿ, ಬೆಳಸಿ ಹಾಗೆ ಕನ್ನಡವನ್ನು ಎಲ್ಲಾ ಕಡೆ ಬಳಸಿ ಆಗಲೇ ನಮ್ಮ ಭಾಷೆ ನಮ್ಮದಾಗಿ ಉಳಿಯಲು ಸಾಧ್ಯ ಎಂಬುದಾಗಿ 'ಕನ್ನಡ ಉಳಿಸಿ' ಕವನದಲ್ಲಿ ಅಭಿವ್ಯಕ್ತಿಸಿದ್ದಾರೆ.

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೫೩.

"ಕನ್ನಡ ಉಳಿಸಿ, ಕನ್ನಡ ಬೆಳೆಸಿ
ಕನ್ನಡವನೆ ಬಳಸಿ"[೧]

ಕನ್ನಡನಾಡಿನಲ್ಲಿ ಕನ್ನಡಿಗರೆ ಪರದೇಶಿಗಳಾಗಿದ್ದಾರೆ. ಯಾರ ಗದ್ದೆಯಲ್ಲಿ ಇನ್ನಾರೋ ಬಂದು ಬೆಳೆ ಬೆಳೆಯುವಂತೆ ಕನ್ನಡನಾಡಿನಲ್ಲಿ ಕನ್ನಡ ಭಾಷೆಗೆ ಅವಕಾಶವಿಲ್ಲದೆ, ಆಂಗ್ಲ ಭಾಷೆಯು ಬಂದು ಇಲ್ಲಿ ಅಭಿವೃದ್ಧಿಗೊಳ್ಳುತ್ತಿದೆ. ಈಗ ಈ ನೆಲವನ್ನು ಆಳುತ್ತಿರುವವರು ಯಾರೋ, ಆದರೆ ಇಲ್ಲಿ ಬಾಳುತ್ತಿರುವವರು ಯಾರೋ, ಅಂದರೆ ಕನ್ನಡನಾಡನ್ನು ಪರದೇಶದವರು ಬಂದು ಆಳ್ವಿಕೆ ಮಾಡುತ್ತಿದ್ದಾರೆ. ಇದು ನಾಡನ್ನು ವಿನಾಶಕ್ಕೆ ತಳ್ಳಿದಂತೆ.

"ನಾಡೇ ನುಡಿಯಲು ನುಡಿಯೇ ನಾಡು
ಸ್ವತಂತ್ರ ದೇಶಕೆ ಬೇರಾವುದು ಹಾಡು
ಕನ್ನಡಕೇತಕೆ ಹೆರನುಡಿಯೊಜ್ಜೆ
ಹೇಸುವುದೇ ನುಡಿಗಿಳಿಯಲು ಬಿಜ್ಜೆ"[೨]

ಇಡೀ ಕನ್ನಡಿಗರೆಲ್ಲ ಒಂದಾಗಿ ನಮ್ಮ ನುಡಿ ಒಂದೇ. ಕನ್ನಡ ನುಡಿ ಎಂದು ಮನಸ್ಸಿಟ್ಟರೆ, ಸ್ವತಂತ್ರಕ್ಕಾಗಿ ಮತ್ತೊಂದು ಹೋರಾಟಬೇಡ. ಅದೇ ನಮ್ಮ ಸ್ವತಂತ್ರ. ಕನ್ನಡಿಗರಿಗೇತಕೆ ಬೇರೆ ಭಾಷೆ, ಅದರ ಕಾಲಡಿಯಲ್ಲಿ ನಾವೇತಕ್ಕಾಗಿ ಬದುಕಬೇಕು. ನಮ್ಮ ಭಾಷೆಯಲ್ಲಿ ನಾವು ವಿದ್ಯೆ ಕಲಿತರೆ ನಮಗೆ ಅಸಹ್ಯವೇ ಎಂಬುದಾಗಿ ಪ್ರಶ್ನಿಸುತ್ತಾರೆ. ಬೇರೆ ಭಾಷೆಗಾಗಿ ನಮ್ಮ ಮನಸ್ಸನ್ನು ಅಡವಿಟ್ಟು, ನಮಗೇನಾದರೂ ಸ್ವರ್ಗದ ಬಾಳು ಸಿಕ್ಕಿದೆಯೇ, ಇಲ್ಲಾ ನಾವೇಕೇ ಅನ್ಯಭಾಷೆಯ ದಾಸರಾಗಬೇಕು. ನಮ್ಮ ಕನ್ನಡ ಜನಕ್ಕೆ ಶೂರತನ ಇಲ್ಲವೇ ನಾವು ಆಳಾಗಿ ದುಡಿಯಬಲ್ಲೆವು ಎನ್ನುವುದಾದರೆ, ಅರಸರಾಗಿ ಆಳ್ವಿಕೆ ಮಾಡಿ, ನಮ್ಮ ರಾಜ್ಯವನ್ನು ನಾವು ಆಳಲಾರೆವೇ, ಎಂಬುದಾಗಿ ದಿಟ್ಟತನದಿಂದ ಪ್ರಶ್ನಿಸಿದ್ದಾರೆ.

"ಕನ್ನಡ ಜನವಲ್ಲದೆ ಕನ್ನಡವನು
ಉಳಿಸುವರಾರೈ ಬೆಳೆಸುವರಾರೈ
ಬಳಸುವರೂ ತಾವಾರಿಹರೈ
ಆದೊಡೆ

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೬೫.

೨. ಅದೇ.,

ತೊಲಗದೆ ನಮ್ಮ ವಿಲಾಯಿತಿಕೆ
ಕನ್ನಡಕೆಂತೈ ಪನ್ನತಿಕೆ?"[೧]

ಕನ್ನಡಕ್ಕಾಗಿ ಹೋರಾಡಿ ಕನ್ನಡವನ್ನು ಉಳಿಸಬೇಕಾದವರು ಕನ್ನಡಿಗರು ಮಾತ್ರ. ಇನ್ನ್ಯಾರು ಅದನ್ನು ಬೆಳೆಸಲು ಮತ್ತಾರಿಂದಲೂ ಸಾಧ್ಯವಿಲ್ಲ. ನಾವು ಕನ್ನಡವನ್ನು ಮಾತ್ರ ಬಳಸುತ್ತೇವೆ. ಅದನ್ನು ಮಾತ್ರ ಆಡಳಿತದಲ್ಲಿ ಒಪ್ಪಿಕೊಂಡು ಕನ್ನಡಿಗರಾದ ನಾವು ಸ್ಪಂದಿಸುತ್ತೇವೆ. ಉಳಿದ ಯಾವುದೇ ಭಾಷೆಯನ್ನು ನಾವು ಒಪ್ಪುವುದಿಲ್ಲ ಎಂದು ನಿಂತರೆ, ನಮ್ಮನ್ನು ಆಳುತ್ತಿರುವ ಭಾಷೆ ತೊಲಗದೇ, ಹಾಗೆ ತೊಲಗಿದರೆ ಕನ್ನಡದ ಪತಾಕೆ ಇಡೀ ಕನ್ನಡನಾಡಿನಲ್ಲಿ ತಲೆ ಎತ್ತಿ ನಿಲ್ಲುತ್ತದೆ ಎಂಬುದಾಗಿ ಹೇಳಿದ್ದಾರೆ.

ಒಟ್ಟಾರೆಯಾಗಿ ಕನ್ನಡನಾಡಿನಲ್ಲಿ ಆಂಗ್ಲರ ಪ್ರಭಾವದಿಂದ ತತ್ತರಿಸಿ ಹೋಗುತ್ತಿದ್ದ, ನಲುಗಿ ಹೋಗುತ್ತಿದ್ದ ಕನ್ನಡವನ್ನು ಮತ್ತೆ ಎತ್ತಿ ಹಿಡಿಯುವ ಸಲುವಾಗಿ ಕನ್ನಡದ ನವೋದಯ ಕವಿಗಳು ತಮ್ಮ ಕವಿತೆಗಳನ್ನು ಬರೆದು ಆ ಮೂಲಕ ಕನ್ನಡಿಗರನ್ನು ಎಚ್ಚರಿಸುವ ಕೆಲಸವನ್ನು ಮಾಡಿದ್ದಾರೆ. ಹಾಗೆಂದ ಮಾತ್ರಕ್ಕೆ ಅನ್ಯಭಾಷೆ ಬೇಕಿಲ್ಲವೆ ಎಂದಲ್ಲ, ಅದು ತಿಳುವಳಿಕೆಗಾಗಿ, ನಮ್ಮನ್ನು ನಾವು ಜಾಗೃತಗೊಳಿಸಿಕೊಳ್ಳಲು ಬೇಕು. ಹಾಗೆಂದು ಅದನ್ನೆ ತಾಯಿಭಾಷೆಯನ್ನಾಗಿ ಮಾಡಿಕೊಳ್ಳಬಹುದೇ? ಕನ್ನಡ ಹೆತ್ತತಾಯಿ, ಆಂಗ್ಲ ಭಾಷೆ ಮಲತಾಯಿ. ಮಲತಾಯಿಯನ್ನು ಪ್ರೀತಿಸಬಾರದು ಎಂದಲ್ಲ. ಅವಳು ನಮ್ಮನ್ನು ಪೋಷಿಸುತ್ತಾಳೆ. ಹಾಗೆಂದು ಹೆತ್ತ ತಾಯಿಯನ್ನು ಕಡೆಗಣಿಸಿ, ಅವಳನ್ನು ಮರೆಯಬಾರದು. ನಾಡಿನ ಹಿತದೃಷ್ಟಿಯಿಂದ ಅದು ಶ್ರೇಯಸ್ಕರವಲ್ಲ. ಆದ್ದರಿಂದ ಮೊದಲು ನಮ್ಮ ಭಾಷೆ, ಅದೇ ನಮ್ಮ ಜೀವನಾಡಿ, ನಮ್ಮ ಹೃದಯದ ಬಡಿತ ನಮ್ಮ ಉಸಿರು, ನಮ್ಮ ಜೀವ, ನಮ್ಮ ದೈವ, ನಮ್ಮ ಸರ್ವಸ್ವವು ಕನ್ನಡ.

ಕನ್ನಡವೇ ಸತ್ಯ
ಕನ್ನಡವೇ ನಿತ್ಯ

ಎಂದು ಕುವೆಂಪುರವರು ಹೇಳಿರುವುದು ಈ ಹಿನ್ನೆಲೆಯಲ್ಲಿಯೇ. ಆದರೆ ಇಂದು ಕನ್ನಡನಾಡಿನಲ್ಲಿ ಕನ್ನಡಿಗರನ್ನು ಹುಡುಕಬೇಕಾದ ಸ್ಥಿತಿ ತಲುಪಿದೆ.

ಹಾಗಾಗಬಾರದು ಎಂಬುದೇ ಇದರ ಉದ್ದೇಶ.

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೬೫.

# ಅಧ್ಯಾಯ – ೫

## ನಾಡುನುಡಿಗೀತೆಗಳಿಂದ ಕರ್ನಾಟಕದ ಮೇಲೆ ಪರಿಣಾಮ

ದೇಶ ನನಗೇನು ಕೊಟ್ಟಿತು ಎಂದು ಕೇಳಬೇಡ; ದೇಶಕ್ಕಾಗಿ ನಾನೇನು ಮಾಡಿದೆ ಎಂದು ಪ್ರಶ್ನಿಸಿಕೋ' ಎಂದು ಒಂದು ಮಾತಿದೆ. ನಾವು ಹುಟ್ಟಿದ ದೇಶಕ್ಕಾಗಿ ಏನು ಮಾಡಿದ್ದೇವೆ ಎಂದು ನಮ್ಮನ್ನು ನಾವೇ ಆಗಾಗ ಕೇಳಿಕೊಳ್ಳುತ್ತಿರಬೇಕು. ಪ್ರತಿಯೊಬ್ಬ ವ್ಯಕ್ತಿಯೂ ತಾನು ಹುಟ್ಟಿದ ದೇಶವನ್ನು ಪ್ರೀತಿಸಬೇಕು. ದೇಶಭಕ್ತಿ ಮೂಡಿಸಿಕೊಳ್ಳಬೇಕು. ತಾಯಿಯನ್ನು ಪ್ರೀತಿಸುವುದು ತಾಯಿನಾಡನ್ನು ಪ್ರೀತಿಸುವುದು ನಾಗರಿಕ ಮನುಷ್ಯನಿಗೆ ಉಸಿರಾಡುವಷ್ಟೆ ಸಹಜ ಎಂದಿದ್ದಾರೆ ಹಿರಿಯರು. ಮಹರ್ಷಿ ವಾಲ್ಮೀಕಿಗಳು 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎಂದು ಬರೆದರು. ದೇಶಾಭಿಮಾನ ದೊಡ್ಡದು. ಯುಗಯುಗಗಳಲ್ಲಿ ದೇಶದೇಶಗಳಲ್ಲಿ ಲಕ್ಷಾಂತರ ಜನ ತಮ್ಮ ರಕ್ತ ಚೆಲ್ಲಿ ನಾಡನ್ನುಳಿಸಲು ಈ ನಾಡು ನುಡಿಗೀತೆಗಳು ಸ್ಫೂರ್ತಿಯಾಗಿವೆ.

ನಾಡು ನುಡಿಗೀತೆಗಳ ಮುಖ್ಯ ಉದ್ದೇಶವೇನು ಎಂದು ತಿಳಿಯುವುದಾದರೆ

೧) ನಾಡು, ನುಡಿಯ ಮೇಲೆ ಅಭಿಮಾನ ಮತ್ತು ಪ್ರೀತಿಯನ್ನು ಹೆಚ್ಚಿಸುತ್ತದೆ.

೨) ನಾಡು, ನುಡಿಯ ಬಗ್ಗೆ ಜನರಲ್ಲಿ ಜಾಗೃತಿಯನ್ನು ಮೂಡಿಸುತ್ತದೆ.

೩) ನಾಡು, ನುಡಿಯ ಬಗ್ಗೆ ಗೌರವವನ್ನು ಮೂಡಿಸುತ್ತದೆ.

೪) ನಾಡು ನುಡಿ ಗೀತೆಗಳಿಂದ ನಮ್ಮ ನಾಡಿನಲ್ಲಿರುವ ಸಂಪತ್ತು, ಸೌಂದರ್ಯ, ತೊಂದರೆಗಳೇನು. ಇವುಗಳ ಬಗ್ಗೆ ಅರಿವು ಮೂಡಿಸುತ್ತದೆ.

೫) ನಾಡು, ನುಡಿಯ ಶ್ರೇಷ್ಠತೆಯ ಬಗ್ಗೆ ಅರಿವು ಮೂಡಿಸುತ್ತದೆ.

೬) ನಾಡು ನುಡಿಯ ಇತಿಹಾಸ ತಿಳಿಯಲು ಸಹಾಯಕವಾಗುತ್ತದೆ.

ನಾಡು ನುಡಿ ಗೀತೆಗಳಿಂದ ಮುಖ್ಯವಾಗಿ ಪರಿಣಾಮ ಬೀರಿದ್ದು ಕರ್ನಾಟಕದ ಸಾಮಾನ್ಯ ಜನತೆಯ ಮೇಲೆ ಕನ್ನಡಿಗರು ಕೇವಲ ದುಡಿಮೆ ಮಾಡಿ ಜೀವನ ನಡೆಸುತ್ತಿದ್ದರು. ಅವರಿಗೆ ತಮ್ಮ ಗ್ರಾಮಬಿಟ್ಟು ಹೊರಗೆ ಜಗತ್ತು ಹೇಗಿದೆ. ನಮ್ಮ ನಾಡು ಹೇಗಿದೆ, ಎಂಬ ಅರಿವು ಕೂಡ ಇರಲಿಲ್ಲ. ಯಾರದೋ ಜಮೀನಿನಲ್ಲಿ ದುಡಿದು ಕೂಲಿ ತೆಗೆದುಕೊಂಡು ತಮ್ಮ ಹೊಟ್ಟೆಬಟ್ಟೆಯನ್ನು ನೋಡಿಕೊಂಡು ಜೀವನ ಸಾಗಿಸುತ್ತಿದ್ದರು. ಅಂತಹ ಪರಿಸ್ಥಿತಿಯಲ್ಲಿ ಕರ್ನಾಟಕ ಛಿದ್ರಛಿದ್ರವಾಗಿ ಕನ್ನಡ ಭಾಷೆ ನಿರ್ಲಕ್ಷ್ಯಕ್ಕೆ

ಒಳಗಾಯಿತು. ಇದನ್ನು ಗಮನಿಸಿದಂತಹ ಸಾಹಿತಿಗಳು. ಕನ್ನಡನಾಡಿನ ಜನರನ್ನು ಎಚ್ಚರಗೊಳಿಸುವ ಸಲುವಾಗಿ ಈ ರೀತಿಯ ಗೀತೆಗಳನ್ನು ಬರೆದು, ಗ್ರಾಮೀಣ ವಿದ್ಯಾವಂತರು ಅದನ್ನು ಓದಿ ಎಚ್ಚೆತ್ತು ತಮ್ಮ ಗ್ರಾಮಗಳಲ್ಲಿಯ ಜನರಲ್ಲಿ ಜಾಗೃತಿಯನ್ನು ಮೂಡಿಸಿ ಕರ್ನಾಟಕ ಏಕೀಕರಣ ಚಳುವಳಿಗೆ ಧುಮುಕುವಂತೆ, ಸ್ವಾತಂತ್ರಕ್ಕಾಗಿ ಹೋರಾಟ ಮಾಡಲು ಪ್ರೋತ್ಸಾಹ ನೀಡಿತು.

ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿದ್ದ ವಿದ್ಯಾವಂತರು ಕೇವಲ ಹೊರಗಿನ ಇತಿಹಾಸ ತಿಳಿದುಕೊಂಡು, ಆಂಗ್ಲಭಾಷೆಯನ್ನು ತಮ್ಮ ಭಾಷೆಯನ್ನಾಗಿ ಸ್ವೀಕರಿಸಿ, ತಮ್ಮ ಮಾತೃಭಾಷೆಯನ್ನು ಮರೆತು, ವಿದೇಶದ ಚರಿತ್ರೆಗಳನ್ನು ಅಭ್ಯಾಸಮಾಡುತ್ತಿದ್ದರು. ಇದು ಒಂದು ದೃಷ್ಟಿಯಿಂದ ಅಭಿವೃದ್ಧಿಗೆ ಕಾರಣವಾದರು; ನಮ್ಮ ಕನ್ನಡ ನಾಡು ಮತ್ತು ನುಡಿಯನ್ನು ಮರೆತ್ತಿದ್ದರು. ಅಂತಹ ವಿದ್ಯಾವಂತರು ಇಂದಿನ ಕನ್ನಡ ಪರಿಸ್ಥಿತಿಯನ್ನು ತಿಳಿಯಲಿ, ಅವರು ಜಾಗೃತಗೊಳ್ಳಲಿ, ನಾಡಿನ ಏಳಿಗೆಯಲ್ಲಿ ಪಾಲ್ಗೊಳ್ಳಬೇಕೆಂಬ ಉದ್ದೇಶದಿಂದಲೆ ರಚಿತವಾದ ನಾಡುನುಡಿಗೀತೆಗಳು ವಿದ್ಯಾವಂತರ ಮೇಲೆ ಪರಿಣಾಮ ಬೀರಿದವು. ಕೆಲವು ವಿದ್ಯಾವಂತರು, ಸಾಮಾನ್ಯಜನರು ಸಂಕುಚಿತ ದೃಷ್ಟಿಯಿಂದ ನಮ್ಮೂರು ಮೈಸೂರು, ನನ್ನೂರು ಧಾರ್ವಾಡ ಎಂದು ಕೇವಲ ತಮ್ಮ ತಮ್ಮ ಪ್ರದೇಶಗಳ ಮೇಲೆ ಮಾತ್ರ ಗೌರವವನ್ನು ಹೊಂದಿದ್ದರು. ಅಂತವರ ಕಣ್ ತೆರೆಸಿ, ನಾವೆಲ್ಲರೂ ಒಂದು, ನಾವು ಕನ್ನಡಿಗರು, ಕನ್ನಡ ನಮ್ಮ ತಾಯಿ ಭಾಷೆ ಎಂಬ ಅಭಿಮಾನ ಮೂಡಿಸುವಲ್ಲಿ ಈ ನಾಡುನುಡಿಗೀತೆಗಳು ಸಹಕಾರಿಯಾದವು.

> "ಸೊಕ್ಕಿನಲ್ಲಿ ತಲೆಯೆತ್ತಿ ಜೊತೆಯವರ ಕೂಟದಲಿ
> ನಾವು ಸಮ ನಿಮಗೆಂದು ನುಡಿವ ಬಲವಿಲ್ಲ
> ಮಿಕ್ಕವರು ಕಡೆಗಣಿಸಿ ನೂಕಿದಾ ಕಡೆ ಬಿದ್ದು,
> ಯಾವ ಮಂಕೋ ಕವಿದು ಹುದುಗಿರುವೆವಲ್ಲ"[೧]

ಉದಾಹರಣೆಯಾಗಿ ಈ ಸಾಲುಗಳನ್ನು ಗಮನಿಸಿದಾಗ ಸಾಮಾನ್ಯ ಜನರಿಗೆ ಎಂತಹ ಮಂಕುಕವಿದಿತ್ತು. ಅವರಿಗೆ ನಾವೆಲ್ಲ ಒಂದು ಎಂದು ಹೇಳುವ ಧೈರ್ಯವೇ ಇರಲಿಲ್ಲ. ತಲೆಯೆತ್ತಿ ಬಾಳುವ ಧೈರ್ಯವು ಕನ್ನಡಿಗರಲ್ಲಿ ಇರಲಿಲ್ಲ. ಇಂತಹ ಸಂದರ್ಭದಲ್ಲಿ ತೀ.ನಂ.ಶ್ರೀ ಉಳಿದಂತೆ ನವೋದಯ ಕವಿಗಳು ಈ ರೀತಿಯ ಕವನಗಳಿಂದ ಜನರಲ್ಲಿ ಜಾಗೃತಿಯನ್ನು ಮೂಡಿಸುವಲ್ಲಿ ಸಹಕಾರಿಯಾಯಿತು.

---

೧. ಬಿ.ಎಂ.ಶ್ರೀ.ಯವರ 'ಕನ್ನಡ ಬಾವುಟ', ಪುಟ. ೧೦೪.

ಕನ್ನಡಿಗರಿಗೆ ನಮ್ಮ ನಾಡು ಮತ್ತು ನುಡಿ ಶ್ರೇಷ್ಠವಾದದ್ದು ಎಂಬ ಅರಿವು ಇರಲಿಲ್ಲ. ಹಿತ್ತಲಗಿಡ ಮದ್ದಲ' ಎಂಬ ಮಾತಿನಂತೆ ನಮ್ಮ ನಾಡಿನ ಹಿರಿಮೆ, ಗರಿಮೆಗಳ ಬಗ್ಗೆ ನಮಗೆ ಅರಿವೆ ಇರಲಿಲ್ಲ. ಇಂತಹ ಒಂದು ಸಂದರ್ಭದಲ್ಲಿ ನವೋದಯ ಕವಿಗಳು ತಮ್ಮ ಕವಿತೆಗಳ ಮೂಲಕ ನಮಗೆ ದಾರಿದೀಪವಾಗಿ ನಿಂತರು. ಚೈತನ್ಯ ಚಿಲುಮೆಗಳಾದರು.

ನವೋದಯ ಕಾಲದಲ್ಲಿಯೇ ನಾಡುನುಡಿ ಗೀತೆಗಳು ಏಕೆ ರಚಿತವಾದವು? ನವೋದಯ ಕಾಲಕ್ಕಿಂತ ಹಿಂದೆ ನಾಡು, ನುಡಿ ಕುರಿತ ಗೀತೆಗಳಿದ್ದರು ಯಥೇಚ್ಛವಾಗಿ ಕಂಡುಬಂದದ್ದು ನವೋದಯ ಕಾಲದಲ್ಲಿ. ಏಕೆಂದರೆ ಕರ್ನಾಟಕದಲ್ಲಿ ಏಕೀಕರಣ ಚಳುವಳಿ ಪ್ರಾರಂಭವಾದ ದಿನಗಳವು. ಈ ಚಳುವಳಿಯ ದೃಷ್ಟಿಯಿಂದ ಎಲ್ಲರೂ ಚಳುವಳಿಯಲ್ಲಿ ಭಾಗವಹಿಸಬೇಕು. ಕನ್ನಡಿಗರು ಕನ್ನಡನಾಡಿನಲ್ಲಿಯೇ ಪರದೇಶಿ–ಗಳಾಗಿರುವುದನ್ನು ತಿಳಿಸಬೇಕಾಗಿತ್ತು. ನಮ್ಮ ನಮ್ಮಲ್ಲಿಯೇ ಇರುವ ವೈರತ್ವವನ್ನು ಅಳಿಸಿ, ನಾವೆಲ್ಲರೂ ಒಂದೇ ಗೂಡಿನ ಹಕ್ಕಿಗಳು ಎಂಬ ಭಾವನೆ ಮೂಡಿಸುವುದಕ್ಕಾಗಿ ಈ ಒಂದು ಸಂದರ್ಭದಲ್ಲಿ ನಾಡುನುಡಿ ಕುರಿತು ಗೀತೆಗಳು ರಚಿತವಾದವು.

ನಾಡುನುಡಿ ಗೀತೆಗಳನ್ನು ರಚಿಸಿದ್ದರಿಂದ ಕನ್ನಡಿಗರು ಕನ್ನಡದ, ಕನ್ನಡ ನಾಡಿನ ಸ್ಥಾನವನ್ನು ತಿಳಿದು, ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಎಲ್ಲರೂ ಭಾಗವಹಿಸಲು ಸಹಕಾರವಾಯಿತು. ಇದರಿಂದ ಛಿದ್ರಛಿದ್ರವಾಗಿದ್ದ ಕರ್ನಾಟಕ, ಕನ್ನಡಿಗರ ಹೋರಾಟದಿಂದ ಮತ್ತೆ ಏಕೀಕರಣಗೊಳ್ಳಲು ಸಹಕಾರಿಯಾಯಿತು. ಅಂತಹ ಒಂದು ಗೀತೆಯನ್ನು ಉದಾಹರಣೆಯಾಗಿ ನೋಡಬಹುದು.

> "ಬೆಂಕಿ ಬಿದ್ದಿದೆ ಮನೆಗೆ ಓ ಬೇಗನೆ ಬನ್ನಿ
> ಎಲ್ಲರೂ ಎದ್ದೆದ್ದೂ ಓಡಿ ಬನ್ನಿ!
> ಕನ್ನಡದ ಗಡಿ ಕಾಯೆ
> ಗುಡಿಕಾಯೆ ನುಡಿಕಾಯೆ
> ಕಾಯಲಾರೆನೆ ಸಾಯೆ
> ಓ ಬನ್ನಿ ಬನ್ನಿ"[೧]

ಹೀಗೆ ಜನತೆಯನ್ನು ಜಾಗೃತಗೊಳಿಸಲು, ಹೋರಾಟಕ್ಕೆ ಸಿದ್ಧತೆ ಮಾಡಲು ಈ ರೀತಿಯ ನಾಡುನುಡಿ ಕುರಿತಾದ ಗೀತೆಗಳನ್ನು ರಚಿಸಲಾಯಿತು.

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೭೩.

ಎಲ್ಲಕ್ಕಿಂತ ಮುಖ್ಯವಾಗಿ ಹೋರಾಟ ಹಲವಾರು ರೀತಿಯಲ್ಲಿ ಸಾಗುತ್ತದೆ. ತೀವ್ರಗಾಮಿಗಳ ರೀತಿ, ಮಂದಗಾಮಿಗಳ ರೀತಿ, ಸತ್ಯಾಗ್ರಹ, ಉಪವಾಸ ಹೀಗೆ ಹಲವರು ರೀತಿಗಳಲ್ಲಿ ಹೋರಾಟ ನಡೆಸುತ್ತಾರೆ. ಆದರೆ ನಮ್ಮ ಸಾಹಿತಿಗಳು ತಮ್ಮ ತಮ್ಮ ಬರವಣಿಗೆಯ ಮೂಲಕ ಕನ್ನಡನಾಡು ಮತ್ತು ನುಡಿಗಾಗಿ ಹೋರಾಟ ನಡೆಸಿದ್ದಾರೆ. ಅದು ತಮ್ಮ ಹೋರಾಟ ಮಾತ್ರವಲ್ಲದೆ ಸಮಾಜಕ್ಕೆ ಪ್ರೇರಣೆಯಾಗಿ ಜನತೆಯ ಹೋರಾಟವು ಆಗಲಿಕ್ಕೆ ಪ್ರೇರಣೆ ನೀಡಿದೆ ಇಷ್ಟೆಲ್ಲಾ ಹೋರಾಟಗಳ ನಡುವೆ ಕರ್ನಾಟಕ ನವೆಂಬರ್ -೧ ೧೯೫೬ರಲ್ಲಿ ಕರ್ನಾಟಕ ಏಕೀಕರಣಗೊಂಡಿತು. ಆದರೂ ಕೆಲವು ಗಡಿಪ್ರದೇಶಗಳು ಇಂದಿಗೂ ನಮಗೆ ಸೇರಿಲ್ಲ. ಆದ್ದರಿಂದ ಅತೃಪ್ತಿಯು ನಮ್ಮಲ್ಲಿದೆ.

ಕನ್ನಡ ನಾಡುನುಡಿ ಗೀತೆಗಳಿಂದ ಜನತೆಯಲ್ಲಿ ಜಾಗೃತಿ ಮೂಡಿತು. ಅದರಿಂದಾಗಿ ಹಲವಾರು ಕನ್ನಡ ಪರ ಸಂಘಟನೆಗಳು, ಕನ್ನಡ ಪರ ಹೋರಾಟಗಳು ನಡೆದವು. ಇದರಿಂದ ಕನ್ನಡ ಶಾಲೆಗಳು ತೆರೆದವು. ಕನ್ನಡದಲ್ಲಿ ವಿದ್ಯಾಭ್ಯಾಸ ಮಾಡಲು ಅವಕಾಶ ನೀಡಲಾಯಿತು. ಇದರಿಂದ ಕನ್ನಡದ ಸಾಹಿತ್ಯ ಕ್ಷೇತ್ರ ವಿಶಾಲವಾಗಿ ಬೆಳೆಯಿತು. ಹೆಚ್ಚು ಪ್ರಖ್ಯಾತ ಕವಿಗಳು, ಸಾಹಿತಿಗಳು ಕಾಣಿಸಿ-ಕೊಂಡಿರುವುದು ಕನ್ನಡದಲ್ಲಿಯೇ. ಕುವೆಂಪು, ಡಿ.ವಿ.ಜಿ., ಮಾಸ್ತಿ, ಪು.ತಿ.ನ. ವಿ.ಸೀತಾರಾಮಯ್ಯ, ಕೆ.ಎಸ್.ನರಸಿಂಹಸ್ವಾಮಿ, ಬೇಂದ್ರೆ ಹೀಗೆ ಹಲವಾರು ಸಾಹಿತಿಗಳು ತಮ್ಮ ತಮ್ಮ ಸಾಹಿತ್ಯದ ಮೂಲಕ ಜನರಲ್ಲಿ ಸಮಾಜದಲ್ಲಿ ಜಾಗೃತಿ ಮೂಡಿಸಿದ್ದಾರೆ.

ಕನ್ನಡಗರಾಗಲು, ಕನ್ನಡತ್ವ ಹಾಗೂ ಕರ್ನಾಟಕತ್ವಗಳನ್ನು ಸಾಧಿಸಲು ನಮಗೆ ಬೇಕಿರುವುದು ಯಾರದೂ ಅಪ್ಪಣೆಯಲ್ಲ. ನಮಗೆ ಬೇಕಿರುವುದು ನಮ್ಮದೇ ಸ್ವಂತದ ಅರ್ಪಣೆ ಮಾತ್ರ. ಅಷ್ಟಾದರೆ ಕನ್ನಡದ ಐತಿಹಾಸಿಕ ಶ್ರೇಷ್ಠತೆಯನ್ನು ಘನತೆಯನ್ನು, ಮತ್ತೊಮ್ಮೆ ಎತ್ತಿಹಿಡಿಯಲು ಸಾಧ್ಯ.

ಒಟ್ಟಾರೆಯಾಗಿ ನಾಡುನುಡಿಗೀತೆಗಳು ಇಂದು ಪ್ರೇರಕ ಶಕ್ತಿಯಾಗಿದೆ. ಯುವಕರಲ್ಲಿ ಮಕ್ಕಳಲ್ಲಿ, ನಾಡಿನಲ್ಲಿ, ದೇಶಭಕ್ತಿ, ನಾಡಭಕ್ತಿ ಭಾಷೆಯ ಮೇಲಿನ ಅಭಿಮಾನ ಮೂಡಿಸುವಲ್ಲಿ ಇಂದಿಗೂ ಈ ಕವಿತೆಗಳು ನಮಗೆ ಪ್ರೇರಕ ಶಕ್ತಿಯಾಗಿದೆ.

# ಅಧ್ಯಾಯ - ೬

## ನಾಡು-ನುಡಿ ಗೀತೆಗಳಲ್ಲಿ ಕಾವ್ಯಧರ್ಮ

ಒಂದು ಕವಿತೆ ಅಥವಾ ಕವನ ಎಂದ ಕೂಡಲೇ ಅಲ್ಲಿ ಒಂದು ಕವಿತೆಗೆ ಇರಬೇಕಾದ ಲಕ್ಷಣಗಳೆಲ್ಲವು ಇರಲೇಬೇಕು. ಅದನ್ನೆ 'ಕಾವ್ಯಧರ್ಮ' ಎಂದು ಕರೆಯಲಾಗುತ್ತದೆ. ಹಾಗಾದರೆ ಕವಿತೆಯಲ್ಲಿ ಇರಬೇಕಾದ ಲಕ್ಷಣಗಳು ಯಾವುವು? ಎಂದಾಗ ಅಲ್ಲಿ ಗೇಯತೆ ಇರಬೇಕು, ಪ್ರಾಸವಿರಬೇಕು, ಮಿತವಾಗಿರಬೇಕು, ಅರ್ಥವತ್ತಾಗಿರಬೇಕು, ರಸಗಳ ಅಭಿವ್ಯಕ್ತಿ ಇರಬೇಕು, ಅಲಂಕಾರ, ಛಂದಸ್ಸು, ರೀತಿ, ಪದ್ಯರೂಪ, ಭಾಷೆಯ ವ್ಯಂಗ್ಯತೆ, ಗುಣ. ಅನುಭವದ ಅಭಿವ್ಯಕ್ತಿ ಇವು ಕಾವ್ಯದ ಮುಖ್ಯ ಲಕ್ಷಣಗಳು.

"ಮೀಮಾಂಸಕರು ಕವಿ; ಭಾಷೆ, ಸಹೃದಯ, ವಾಸ್ತವಿಕ ಪ್ರಯೋಜನಗಳ ಆಧಾರದ ಮೇಲೆ ಕಾವ್ಯದ ಲಕ್ಷಣ ಹೇಳಲು ಪ್ರಯತ್ನಿಸಿದ್ದಾರೆ. ಕವಿಯ ಕೇಂದ್ರೀಕರಣದ ಮೇಲೆ "ಕಾವೇ; ಕರ್ಮ ಕಾವ್ಯಂ" ಎಂದಿದ್ದಾರೆ. ಭಾಷೆ ಹಾಗೂ ಕಾವ್ಯತಂತ್ರದ ಆಧಾರದ ಮೇಲೆ "ಶಬ್ದಾರ್ಥ ಸಹಿತೌ ಕಾವ್ಯ, ಕಾವ್ಯಂ ಗ್ರಾಹ್ಯಂ ಅಲಂಕಾರತ್ "ರೀತಿ ರಾತ್ಮ ಕಾವ್ಯಸ್ಯ", "ವಕ್ರಕವಿ ವ್ಯಾಪಾರ ಶಾಲಿನಿ ಬಂದೇ ವ್ಯವಸ್ಥಿತ" ಎಂದಿದ್ದಾರೆ. ಪ್ರಯೋಜನಗಳ ಆಧಾರದ ಮೇಲೆ "ಕಾವ್ಯಂ ಯಶಸ್ಸೇ ಅರ್ಥಕೃತೆ ಶಿವೇತರ ಕ್ಷತೆಯೇ ಸದ್ಯಃಪರ ನಿವೃತಯೇ ಎಂದಿದ್ದಾರೆ. ಒಟ್ಟಾರೆಯಾಗಿ ಕಾವ್ಯ ಎಂದರೆ ಸಾಹಿತ್ಯ".[೧]

ಕೆಲವೊಮ್ಮೆ ಎಲ್ಲಾ ಕಾಲಘಟ್ಟಗಳಲ್ಲಿಯೂ ಈ ಕಾವ್ಯ ಸೌಂದರ್ಯ ಬಿಟ್ಟು ಹೋಗುವುದು ಉಂಟು. ಏಕೆಂದರೆ ಅಲ್ಲಿ ವಿಚಾರವೇ ಪ್ರಧಾನವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಕಾವ್ಯತ್ವ ಗೌಣವಾಗಿ ಅಲ್ಲಿ ವಿಚಾರವೇ ಪ್ರಮುಖವಾಗಿ ನಿಲ್ಲುತ್ತದೆ. ಅಂತಹ ಕಾಲ ಘಟ್ಟ ಮುಖ್ಯವಾಗಿ ದಲಿತ ಮತ್ತು ಬಂಡಾಯ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ಹಾಗೆಂದು ಕಾವ್ಯತ್ವ ಇಲ್ಲವೇ ಇಲ್ಲ ಎನ್ನುವಂತಿಲ್ಲ. ಕೆಲವು ಸಂದರ್ಭಗಳಲ್ಲಿ ಮಾತ್ರ ಅದನ್ನು ಬಿಟ್ಟು ವಿಚಾರ ದೃಷ್ಟಿಯಿಂದ ನೋಡಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ವಿಚಾರವೇ ಪ್ರಧಾನವಾಗಿದ್ದು ಕಾವ್ಯತ್ವ ಗೌಣವಾಗುತ್ತದೆ.

---

೧. ತೀ.ನಂ.ಶ್ರೀ.ಅವರ "ಭಾರತೀಯ ಕಾವ್ಯಮೀಮಾಂಸೆ", ಪುಟ. ೬೪.

ಅದೇ ರೀತಿ ನವೋದಯ ಕಾಲದಲ್ಲಿಯೂ ಕೂಡ ಕೆಲವು ಕವಿಗಳು ಕಾವ್ಯತ್ವವನ್ನು ಇಟ್ಟು ಕವಿತೆಗಳನ್ನು ರಚಿಸಿದರು. ಮತ್ತೆ ಕೆಲವರು ವಿಚಾರಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿದರು. ಹಾಗಾದರೆ ನಾಡುನುಡಿ ಗೀತೆಗಳಲ್ಲಿ ಜನರನ್ನು ಜಾಗೃತಗೊಳಿಸುವ ಭರದಲ್ಲಿ ಕಾವ್ಯತ್ವ ಉಳಿದಿಲ್ಲವೇ ಎಂಬ ವಿಚಾರವನ್ನು ಗಮನಿಸಿದಾಗ ಕೆಲವೊಮ್ಮೆ ಹೌದು ಮತ್ತೆ ಕೆಲವೊಮ್ಮೆ ಇಲ್ಲ ಎಂಬ ಉತ್ತರ ಬರುತ್ತದೆ.

ನವೋದಯ ಕಾಲದ ನಾಡುನುಡಿಗೀತೆಗಳಲ್ಲಿ ಕಾವ್ಯದ ಕೆಲವು ಲಕ್ಷಣಗಳುಳ್ಳ ಕವಿತೆಗಳಲ್ಲಿ ಕುವೆಂಪುರವರ 'ಕನ್ನಡ ಡಿಂಡಿಮ' ಕವಿತೆಯನ್ನು ಗಮನಿಸಿದಾಗ ಅಲ್ಲಿ ಗೇಯತೆ ಇದೆ. ತಾಳ ಇದೆ, ಅಂತ್ಯಪ್ರಾಸವಿದೆ, ಮಿತವಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ನಾಡಿನ ಹಿತವನ್ನು ಸಾರುವಂತಹ ಪದ್ಯವಾಗಿದೆ. ಹಾಗೆ ನಾಲ್ಕು ನಾಲ್ಕು ಮಾತ್ರೆಗಳುಳ್ಳ ಸಂಕ್ಷಿಪ್ತ ಕವಿತೆಯಾಗಿದೆ.

ಬಾರಿಸು ಕನ್ನಡ ಡಿಂಡಿಮವ
ಓ ಕರ್ನಾಟಕ ಹೃದಯ ಶಿವ
ಸತ್ತಂತಿಹರನು ಬಡಿದೆಚ್ಚರಿಸು
ಕಚ್ಚಾಡುವವರನು ಕೂಡಿಸಿ ಒಲಿಸು
ಹೊಟ್ಟೆಯ ಕಿಚ್ಚಿಗೆ ತಣ್ಣೀರ ಸುರಿಸು
ಒಟ್ಟಿಗೆ ಬಾಳುವ ತೆರದಲಿ ಹರಸು[೧]

ಈ ಪದ್ಯವನ್ನು ಗಮನಿಸಿದಾಗ ಹಾಡುವುದಕ್ಕೆ ಯೋಗ್ಯವಾದ ಚಿಕ್ಕ ಕವಿತೆಯಾಗಿದೆ. ಇಲ್ಲಿ ಎಚ್ಚರಿಸು, ಒಲಿಸು, ಸುರಿಸು, ಹರಸು ಎಂಬ ಪದಗಳನ್ನು ಬಳಸುವುದರ ಮೂಲಕ ಅಂತ್ಯಪ್ರಾಸ ಗಮನಿಸಬಹುದು. ಸಣ್ಣ ಕವನವಾದರು ಹಿರಿದಾದ ಅರ್ಥವನ್ನು ಕೊಡುತ್ತದೆ. ಈ ಪದ್ಯವನ್ನು ಗಮನಿಸಿದಾಗ ಕವಿಯ ಅನುಭವ ಭಾಷೆಯ ಮುಖಾಂತರ ಹೇಗೆ ಹೊರಹೊಮ್ಮಿದೆ ಎಂಬುದನ್ನು ಗಮನಿಸಬಹುದು.

ಕನ್ನಡದ ಜನತೆ ತಿಳಿದು ತಿಳಿಯದವರಂತೆ, ಮೂರ್ಖರಂತೆ ವರ್ತಿಸುತ್ತಿದ್ದಾರೆ. ಅಂತಹವರನ್ನು ಬರೀ ಎಚ್ಚರಿಸಿದರೆ ಅವರು ಮಾತಿಗೆ ಎಚ್ಚರವಾಗುವುದಿಲ್ಲ. ಆದ್ದರಿಂದ ಜನರಿಗೆ ಶಿವನಲ್ಲಿ ಅಪಾರ ನಂಬಿಕೆ. ಆದ್ದರಿಂದ ಶಿವನ ಢಮರುಗವನ್ನು ಬಾರಿಸಿಯೇ ಅವರನ್ನು ಬಡಿದು ಎಚ್ಚರಿಸಬೇಕು. ಅದು ಎಂತಹ ಡಿಂಡಿಮ ಎಂದರೆ ಕನ್ನಡದ ಡಿಂಡಿಮವನ್ನು ಬಾರಿಸಬೇಕು ಎಂಬುದಾಗಿ ಕರೆ ನೀಡಿದ್ದಾರೆ.

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೩೧.

ಈ ಒಂದು ಕವಿತೆಯಲ್ಲಿ ಶಬ್ಧಗಳೇ ಭಾವನೆಗಳನ್ನು ಅಭಿವ್ಯಕ್ತಿಸುವಂತೆ ತೋರುತ್ತದೆ. ಕವಿ ತನ್ನ ಭಾವನೆಗಳನ್ನು ಅಭಿವ್ಯಕ್ತಿಸುವ ಸಲುವಾಗಿ ಭಾಷೆಯನ್ನು ಸಾಧನವನ್ನಾಗಿ ಮಾಡಿಕೊಂಡಿರುವುದನ್ನು ಗಮನಿಸಬಹುದು. ಸತ್ತಂತೆ ಮಲಗಿರುವವರನ್ನು ಶಿವನ ಢಮರುಗದ ಶಬ್ಧದಿಂದಲೇ ಅವರನ್ನು ಎಚ್ಚರಿಸಬೇಕು. ಕಚ್ಚಾಡುವವರನ್ನೆಲ್ಲಾ ಒಟ್ಟಿಗೆ ಸೇರಿಸಿ, ಒಬ್ಬರಿಗೊಬ್ಬರು ಹೊಟ್ಟೆ ಕಿಚ್ಚುಪಡದಂತೆ ಅವರಲ್ಲಿ ಸಹಕಾರ ಮನೋಭಾವ ಬೆಳಸಿ, ಒಟ್ಟಿಗೆ ಬಾಳುವಂತೆ ಹರಸು ಎಂಬುದಾಗಿ ಕವಿ ಈ ಸಮಾಜವನ್ನು ಕಂಡು ನೊಂದು ಅದು ಬದಲಾವಣೆಗೊಳ್ಳಬೇಕು ಎಂಬುದಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಅದೇ ರೀತಿ ನವೋದಯ ಕಾಲದ ಆಚಾರ್ಯ ಪುರುಷರಾದ ಬಿ.ಎಂ.ಶ್ರೀ.ಯವರ 'ಕಾಣಿಕೆ' ಕವಿತೆಯನ್ನು ಗಮನಿಸಿದಾಗ ಅಲ್ಲಿಯೂ ಕಾವ್ಯತ್ವದ ಗುಣಗಳು ಕಂಡುಬರುತ್ತವೆ.

ಮೊದಲು ತಾಯ ಹಾಲು ಕುಡಿದು
ಲಲ್ಲೆಯಿಂದ ತೊದಲಿ ನುಡಿದು
ಕಳೆಯರೊಡನೆ ಬೆಳೆದುಬಂದ
ಮಾತದಾವುದು
ನಲ್ಲೆಯೊಲವ ತೆರೆದು ತಂದ
ಮಾತದಾವುದು[೧]

ಈ ಒಂದು ಚರಣವನ್ನು ಗಮನಿಸಿದಾಗ ಇಲ್ಲಿ ಗೇಯತೆಯಿದೆ. ಪದಲಾಲಿತ್ಯವಿದೆ, ಅಂತ್ಯಪ್ರಾಸವಿದೆ, ಮಿತವಾಗಿದೆ, ಭಾವನಾತ್ಮಕವಾಗಿದೆ. ಹಾಗೆ ಕನ್ನಡ ನುಡಿ ಶ್ರೇಷ್ಠವಾದುದು ಅದು ತಾಯಿ ಭಾಷೆ ಎಂಬ ವಿಚಾರವು ಇದೆ. ಹಾಗೆಯೇ ಈ ಒಂದು ಕವಿತೆಯಲ್ಲಿ ಶಬ್ದಚಮತ್ಕಾರವು ಕೂಡಿದೆ. ಅದಕ್ಕೆ ಉದಾಹರಣೆಯಾಗಿ ಗಮನಿಸಿದಾಗ

"ಹೀಗೆ ನನಗೆ ಹಬ್ಬವಾಗಿ
ಇನಿಯರಿಬ್ಬರನ್ನು ತೂಗಿ
ಇವಳ ಸೊಬಗನವಳು ತೊಟ್ಟು
ನೋಡ ಬಯಸಿದೆ

೧. ಬಿ.ಎಂ.ಶ್ರೀ.ಅವರ 'ಕನ್ನಡ ಬಾವುಟ', ಪುಟ. ೯೫.

ಅವಳ ತೊಡಿಗೆ ಇವಳಿಗಿಟ್ಟು
ಹಾಡ ಬಯಸಿದೆ"[೧]

ಈ ಕವಿತೆಯನ್ನು ಗಮನಿಸಿದಾಗ ಬಿ.ಎಂ.ಶ್ರೀ.ಯವರ ಅನುಭವದ ಅಭಿವ್ಯಕ್ತಿ ಶಬ್ದಗಳಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಗುರುತಿಸಬಹುದು. ಕನ್ನಡ ಮತ್ತು ಇಂಗ್ಲಿಷ್ ಎರಡು ಭಾಷೆಗಳು ಅವಶ್ಯಕ ಎಂಬುದನ್ನು ಗುರುತಿಸಿ ಇಬ್ಬರು ನನಗೆ ಇನಿಯರು ಅವರು ನಮಗೆ ಪ್ರೀತಿ ತೋರಿಸುತ್ತಾರೆ. ಆದ್ದರಿಂದ ಕನ್ನಡದೊಳಗೆ ಇಂಗ್ಲಿಷ್ ಬೆರೆತುಹೋಗಿದೆ ಎಂಬುದನ್ನು ತಿಳಿಸುತ್ತ ಇವಳ ಸೊಬಗನವಳು ತೊಟ್ಟು ನೋಡ ಬಯಸಿದೆ. ಅವಳ ತೊಡಿಗೆ ಇವಳಿಗಿಟ್ಟು ಹಾಡ ಬಯಸಿದೆ ಎಂಬುದಾಗಿ ಅಭಿವ್ಯಕ್ತಿಸಿದ್ದಾರೆ.

ಅದೇ ರೀತಿ "ಹುಯಿಲಗೋಳ ನಾರಾಯಣರಾಯರು" "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಕವಿತೆಯಲಿ

"ಪಾವನೆಯರಾ ಕೃಷ್ಣಭೀಮೆಯರ ತಾಯ್ನಾಡು
ಕಾವೇರಿ ಗೋದೆಯರು ಮೈದೊಳೆವ ನಲುನಾಡು
ಆವಗಂ ಸ್ಫೂರ್ತಿಸುವ ಕಬ್ಬಿಗರ ನಡೆಮಾಡು
ಕಾವ ಗದುಗಿನ ವೀರನಾರಾಯಣನ ಬೀಡು"[೨]

ಈ ಪದ್ಯದಲ್ಲಿ ಕಾವ್ಯತ್ವವಿರುವುದನ್ನು ಕಾಣಬಹುದು. ಗೇಯತೆ ಇದೆ, ಧ್ವನಿ ಇದೆ, ಭಾಷೆಯ ಪ್ರೌಢತೆ ಇದೆ. ಅದೇ ರೀತಿ ಛಂದಸ್ಸಿನ ದೃಷ್ಟಿಯಿಂದ ಗಮನಿಸಿದಾಗ ಸಂಕ್ಷಿಪ್ತವಾಗಿದೆ. ಅಂತ್ಯ ಪ್ರಾಸವಿರುವುದನ್ನು ಗಮನಿಸಬಹುದು.

ಒಟ್ಟಾರೆಯಾಗಿ ಈ ರೀತಿಯ ಗೀತೆಗಳನ್ನು ಗಮನಿಸಿದಾಗ ಅಲ್ಲಿ ಕಾವ್ಯತ್ವವಿರುವುದನ್ನು ಗಮನಿಸಬಹುದು. ಹಾಗೆ ವಿಚಾರದೃಷ್ಟಿಯಿಂದ ಪ್ರೌಢತೆ ಇರುವುದನ್ನು ಕಾಣಬಹುದು.

ಭಾಷಾ ದೃಷ್ಟಿಯಿಂದ ನೋಡಿದಾಗ ಈ ಆಧುನಿಕ ನವೋದಯ ಕಾಲದಲ್ಲಿಯೂ ಕೆಲವರು ಸಂಸ್ಕೃತ ಭೂಯಿಷ್ಟವಾಗಿ, ಇನ್ನೂ ಕೆಲವರು ಜಾನಪದ ಶೈಲಿಯ ಆಡುನುಡಿಯಲ್ಲಿ ಕವಿತೆಗಳನ್ನು ರಚಿಸಿದ್ದಾರೆ. ಈ ರೀತಿ ಗಮನಿಸುವುದಾದರೆ

೧. ಬಿ.ಎಂ.ಶ್ರೀ.ಅವರ 'ಕನ್ನಡ ಬಾವುಟ', ಪುಟ. ೯೬.
೨. ಅದೇ, ಪುಟ. ೧೧೦.

ಕುವೆಂಪುರವರು ಭಾಷೆಯನ್ನು ಅತ್ಯಂತ ಪ್ರೌಢವಾಗಿ ಬಳಸುತ್ತಾರೆ. ಅದೇ ಬೇಂದ್ರೆಯವರು ಜಾನಪದ ಶೈಲಿಯಲ್ಲಿ ಆಡುನುಡಿಯ ಮೂಲಕ ಕವಿತೆಗಳನ್ನು ರಚಿಸಿದ್ದಾರೆ.

ಬೇಂದ್ರೆಯವರ 'ಒಂದೇ ಕರ್ನಾಟಕ' ಕವಿತೆಯನ್ನು ಗಮನಿಸಿದಾಗ ಅಲ್ಲಿ ಭಾಷೆ ಸರಳವಾಗಿದ್ದು ಲಾಲಿತ್ಯವಿರುವುದನ್ನು ಗಮನಿಸಬಹುದು.

ಒಂದೇ ಒಂದೇ ಒಂದೇ ಕರ್ನಾಟಕ ಒಂದೇ
ಇಂದೇ ಮುಂದೆ ಎಂದೆ ಕರ್ನಾಟಕ ಒಂದೇ[೧]

ಅದೇ ರೀತಿ ಕುವೆಂಪುರವರ ಕನ್ನಡ ಡಿಂಡಿಮ' ಗೀತೆಯ ಗಮನಿಸಿದಾಗ ಭಾಷೆಯಲ್ಲಿ ಕ್ಲಿಷ್ಟತೆ ಹಾಗೂ ಪ್ರೌಢತೆ ಇರುವುದನ್ನು ಕಾಣಬಹುದು.

"ಕ್ಷಯಿಸೆ ಶಿವೇತರ ಕೃತಿಕೃತಿಯಲಿ
ಮೂಡಲಿ ಮಂಗಳ ಮತಿಮತಿಯಲ್ಲಿ
ಕವಿ ಋಷಿ ಸಂತರ ಆದರ್ಶದಲಿ
ಸರ್ವೋದಯವಾಗಲಿ ಸರ್ವರಲಿ"[೨]

ನವೋದಯ ಕಾಲದಲ್ಲಿ ಕಾವ್ಯತ್ವವಿರುವ ಗೀತೆಗಳು ಹೇಗೆ ಮೂಡಿಬಂದಿವೆಯೋ ಅದೇ ರೀತಿ ಕಾವ್ಯತ್ವಕ್ಕೆ ಮಹತ್ವಕೊಡದೆ ವಿಚಾರದ ದೃಷ್ಟಿಯಿಂದಲೂ ಕವಿತೆಗಳು ರಚನೆಯಾಗಿದೆ. ಅದು ತಪ್ಪು ಎಂದು ಹೇಳಲಾಗುವುದಿಲ್ಲ. ಹಾಗೆ ಅವು ಕವಿತೆಗಳಲ್ಲ, ಎಂದು ಕೂಡ ಹೇಳಲಾಗದು, ಅದಕ್ಕೂ ಕವಿತೆಗಳ ಸ್ಥಾನವನ್ನು ನೀಡಲಾಗಿದೆ. ಅಂತಹ ಕೆಲವು ಗೀತೆಗಳನ್ನು ಇಲ್ಲಿ ಗಮನಿಸಬಹುದು.

ಮಾಸ್ತಿಯವರ 'ಇಂದು ಕನ್ನಡ ನಾಡು' ಕವಿತೆಯನ್ನು ಗಮನಿಸಿದಾಗ ಅಲ್ಲಿ ಕಾವ್ಯತ್ವಕ್ಕಿಂತ ವಿಚಾರ ಎದ್ದು ಕಾಣಿಸುತ್ತದೆ.

"ಹರಿದು ತುಂಡಾಗಿಹುದು ಇಂದು ಕನ್ನಡ ನಾಡು
ಅಣ್ಣತಮ್ಮಂದಿರು, ತಾವಣ್ಣ ತಮ್ಮಂದಿರೆಂದು
ತಿಳಿಯಲಾರರು ನಡೆಯಲಾರರು; ಬಾ ಬಂಧು
ಎಂದು ಕರೆಯಲು, ಸ್ವಾಮಿ ನನ್ನೂರು ಧಾರ್ವಾಡ

---

೧. ಮಂಜುನಾಥ್.ಕೆ ಅವರ 'ನಾಡಗೀತೆಗಳು', ಪುಟ. ೫೨.
೨. ಅದೇ., ಪುಟ. ೩೧.

ನನ್ನೂರು ಮೈಸೂರು, ನನ್ನೂರು ಎರಕಾಡು
ಮರ್ಯಾದೆಯಿಂದ ಕರೆಯಿರಿ ನನ್ನ ಎನ್ನುವರು"[೧]

ಈ ಗೀತೆಯಲ್ಲಿ ಗೇಯತೆ ಕಂಡುಬರುವುದಿಲ್ಲ. ಹಾಗೆ ಪ್ರಾಸದ ದೃಷ್ಟಿಯಿಂದ ಇದು ಸಲ್ಲದು. ಆದರೆ ಕನ್ನಡ ನಾಡು ಇಂದು ಛಿದ್ರವಾಗಿದೆ. ಅದನ್ನು ಮತ್ತೆ ಏಕೀಕರಣಗೊಳಿಸಿ, ನಾವೆಲ್ಲರೂ ಅಣ್ಣತಮ್ಮಂದಿರು ಎಂಬ ಭಾವನೆ ಬೆಳೆಸುವ ವಿಚಾರ ಇಲ್ಲಿದೆ. ಆದ್ದರಿಂದ ವಿಚಾರದೃಷ್ಟಿಯಿಂದ ಇದಕ್ಕೂ ಕಾವ್ಯದಲ್ಲಿ ಸ್ಥಾನ ದೊರೆತಿದೆ.

ಅದೇ ರೀತಿ 'ಶ್ರೀ'ಯವರ 'ಕನ್ನಡ ತಾಯ ನೋಟ' ಕವಿತೆಯಲ್ಲಿ ಕನ್ನಡ ನಾಡಿನ ಶ್ರೇಷ್ಠತೆಯನ್ನು ತಿಳಿಸಿ ಹಂಪೆಯ ಇಂದಿನ ಸ್ಥಿತಿಯನ್ನು ನೆನೆದು ಮುಂದೆ ಕನ್ನಡ ನಾಡನ್ನು ಕಾಪಾಡಿ ಎಂಬ ವಿಚಾರವನ್ನು ತಿಳಿಸುತ್ತದೆ. ಇಲ್ಲಿ ಕಾವ್ಯತ್ವಕ್ಕಿಂತ ವಿಚಾರಕ್ಕೆ ಪ್ರಾಮುಖ್ಯತೆ ನೀಡಲಾಗಿದೆ.

" 'ಬಳಸಿ ಬಂದೆನು ಸುತ್ತ ಕನ್ನಡದ ನಾಡುಗಳ ಸಿರಿಯ ನೋಡುತ್ತ'
ತಾಯಡಿಯ ಹುಡಿಯ ತಲೆಗಾನುತ್ತ ಹರಕೆಯ ಪವಿತ್ರ ಯಾತ್ರೆಯಲಿ

ಏನು ಚೆಲುವಿನ ನಾಡು! ಚೆಲುವು ಚೆಲ್ಲುವ ನಾಡು।
ಕನ್ನಡ ನಾಡು"[೨]

ಈ ಕವಿತೆಯನ್ನು ಗಮನಿಸಿದಾಗ ಇಲ್ಲಿ ಗೇಯತೆ ಇಲ್ಲ, ಪ್ರಾಸ, ಸಂಕ್ಷಿಪ್ತತೆ, ಛಂದಸ್ಸು, ಯಾವ ಅಂಶಗಳು ಇಲ್ಲಿ ಕಂಡುಬರುವುದಿಲ್ಲ. ಆದರೆ ವಿಚಾರಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿ, ನಮ್ಮ ಹಳೆಯ ಸೌಂದರ್ಯವನ್ನು ನಮ್ಮ ನಾಡನ್ನು ಉಳಿಸಿ, ಬೆಳಸಿ ಎಂಬ ಅರಿಕೆ ಇದೆ.

ಒಟ್ಟಾರೆಯಾಗಿ ನವೋದಯ ಕಾಲದಲ್ಲಿ ಕಾವ್ಯತ್ವ ಗುಣಗಳನ್ನು ಇಟ್ಟು ನಾಡಗೀತೆಗಳನ್ನು ರಚಿಸಿರುವುದು ಉಂಟು. ಹಾಗೆ ಕಾವ್ಯತ್ವಗಳನ್ನು ಬಿಟ್ಟು ವಿಚಾರದ ದೃಷ್ಟಿಯಿಂದಲೂ ನಾಡಗೀತೆಗಳನ್ನು ಬರೆದಿರುವುದುಂಟು. ಆದರೆ ಕಾವ್ಯಗುಣಗಳನ್ನು ಇಟ್ಟು ಕವಿತೆ ರಚಿಸಿದರೆ ಅದು ಹೆಚ್ಚು ಬೆಳಕಿಗೆ ಬರುತ್ತದೆ. ಎಲ್ಲರ ಬಾಯಿಯಲ್ಲೂ ಉಳಿಯುತ್ತದೆ. ಇಲ್ಲದಿದ್ದರೆ ಅದು ಜನರ ದೃಷ್ಟಿಯಲ್ಲಿ ಬಹುಬೇಗ ಕಣ್ಮರೆಯಾಗುತ್ತದೆ. ಒಂದು ಹೆಣ್ಣು ಸಹಜವಾಗಿ ಸುಂದರಳಾಗಿರುತ್ತಾಳೆ. ಆದರೆ ಸ್ವಲ್ಪ ಅಲಂಕಾರ ಮಾಡಿದರೆ ಅವಳ ಸೌಂದರ್ಯ ಮತ್ತಷ್ಟು ಹೆಚ್ಚುತ್ತದೆ. ಇಲ್ಲದಿದ್ದರೆ ಸಾಧಾರಣವಾಗಿ

---

೧. ಬಿ.ಎಂ.ಶ್ರೀ.ಅವರ 'ಕನ್ನಡ ಬಾವುಟ', ಪುಟ. ೧೩೮.
೨. ಅದೇ, ಪುಟ. ೧೬೪.

ಕಾಣುತ್ತಾಳೆ. ಅದೇ ರೀತಿ ಕವಿತೆಯಲ್ಲಿಯೂ ಗೇಯತೆ, ಲಾಲಿತ್ಯ, ಪದಸೌಂದರ್ಯ, ಪ್ರಾಸ ಇವುಗಳು ಕವಿತೆಗೆ ಶೃಂಗಾರ, ಅದಿಲ್ಲದಿದ್ದರೆ ಅದು ಒಂದು ಸಾಧಾರಣ ಕವಿತೆಯಾಗೆ ಉಳಿಯುತ್ತದೆ. ಆದ್ದರಿಂದ ಕವಿತೆಯಲ್ಲಿ, ಕಾವ್ಯತ್ವವನ್ನು ಇಟ್ಟು ರಚಿಸಿದರೆ ಅವು ಶಾಶ್ವತವಾಗಿರುತ್ತವೆ.

# ಉಪಸಂಹಾರ

ಕಾವೇರಿಯಿಂದ ಗೋದಾವರಿವರೆಗಿರ್ದ ಕನ್ನಡ ನಾಡು ಹರಿದು ಹಂಚಿಹೋಗಿದ್ದು, ಇವುಗಳನ್ನೆಲ್ಲ ಒಂದುಗೂಡಿಸಬೇಕೆಂಬ ಕನಸನ್ನು ನಮ್ಮ ಸಾಹಿತಿಗಳು ಕಟ್ಟಿಕೊಂಡರು. ಆಲೂರು ವೆಂಕಟರಾಯರು ಕರ್ನಾಟಕ ಗತವೈಭವ ಎಂಬ ಹೊತ್ತಿಗೆ ರಚಿಸಿದರು. ಬಿ.ಎಂ.ಶ್ರೀ.ಯವರ ನೇತೃತ್ವದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕದ ಉದ್ದಗಲಕ್ಕೂ ದಸರೆಯ ಸಮಯದಲ್ಲಿ ನಾಡಹಬ್ಬ ಆಚರಿಸಲು ಕರೆ ಕೊಡಲಾಯಿತು. ಶ್ರೀನಿವಾಸ, ತೀ.ನಂ.ಶ್ರೀ, ಕುವೆಂಪು, ಹುಯಿಲಗೋಳು, ಆನಂದಕಂದ, ಬೇಂದ್ರೆ ಇವರೆಲ್ಲ ಕನ್ನಡದ ಸ್ಥಿತಿಗತಿಗಳನ್ನು ಕುರಿತು ಕವನಗಳನ್ನು ರಚಿಸಿದರು. ನಾಡಹಬ್ಬ ಆಚರಿಸುವ ಮೂಲಕ ಕನ್ನಡನಾಡನ್ನು ಒಂದುಗೂಡಿಸುವ ಕನಸನ್ನು ನನಸು ಮಾಡಲು ಎಲ್ಲ ಕನ್ನಡಿಗರಲ್ಲಿ ಜಾಗೃತಿ ಮೂಡಿಸಲಾಯಿತು.

"ಕರ್ನಾಟಕ ಏಕೀಕರಣವಾಗಿ ನಾಲ್ಕು ದಶಕ ದಾಟಿದ ಸಂದರ್ಭದಲ್ಲಿ 'ನಿಜವಾಗಿಯೂ ಕರ್ನಾಟಕ ಏಕೀಕರಣವಾಗಿದೆಯೇ?' ಎಂಬ ಪ್ರಶ್ನೆ ಹಲವು ಕನ್ನಡಿಗರನ್ನಾದರೂ ಕಾಡಿದರೆ ಅದನ್ನು ಅಸಹಜ ಅಥವಾ ಆಶ್ಚರ್ಯ ಎಂದು ಭಾವಿಸಬೇಕಾದಿಲ್ಲ. ಕನ್ನಡ ಭಾಷೆಯನ್ನು ಮಾತನಾಡುವವರೆಲ್ಲ ಒಂದೇ ಆಡಳಿತಕ್ಕೆ ಒಳಪಟ್ಟು, ಒಂದು ನಾಡಾಗಿ ಭಾವೈಕ್ಯತೆಯನ್ನು ಸಾಧಿಸಬೇಕೆಂಬ ಹೆಬ್ಬಯಕೆ ಕರ್ನಾಟಕ ಏಕೀಕರಣಕ್ಕೆ ಶ್ರಮಿಸಿದ ಹಿರಿಯದಾಗಿತ್ತು."[೧]

ನಾವೆಲ್ಲ ಒಂದೆ ಮನೆಯವರಣ್ಣ ತಮ್ಮಂದಿರು
ನಮ್ಮೆಲ್ಲರನು ಪಡೆದುದೊಂದೆ ನಾಡಿನ ಬಸಿರು
ಎಂದು ನಾವರಿದೆವೆ ನಮಗೆ ಇನ್ನಾರೆದುರು!

ಎಂದು ಶ್ರೀನಿವಾಸರು ಹಂಬಲಿಸಿದರೆ, ತೀ.ನಂ.ಶ್ರೀಕಂಠಯ್ಯನವರು

ಒಬ್ಬ ಕನ್ನಡ ದೇವಿಯುದರದಿಂದೊಗೆದು
ಒಬ್ಬ ಕನ್ನಡ ಜನನಿಯೆದೆಹಾಲ ಮೊರೆದು,
ಒಬ್ಬ ಮಾತೆಯ ಮಡಿಲು ತೊಡೆಗಳಲಿ ಕುಣಿದು,
ಒಬ್ಬ ತಾಯುಲಿಗಳನೆ ತೊದಲಿ ನುಡಿದು

---

೧. ಡಾ. ಹೆಚ್.ಎಸ್.ಗೋಪಾಲ್‌ರಾವ್‌ರ 'ಕರ್ನಾಟಕ ಏಕೀಕರಣ ಇತಿಹಾಸ', ಪುಟ. ೨೬೭.

ಬೆಳೆದ ಕನ್ನಡಿಗರೇ, ಬಂಧು ಕನ್ನಡಿಗರೇ,

ಇನಿಯ ಕನ್ನಡಿಗರೆ, ಸ್ವಾಗತವು ನಿಮಗೆ

ಎಂದು ಎಲ್ಲಾ ಕನ್ನಡಿಗರನ್ನು ಮೈಸೂರಿಗೆ ಸ್ವಾಗತಿಸಿದರು.

ಈ ನಮ್ಮ ನಾಡಿಗೆ ಓಡಿ ಬನ್ನಿ,

ನಿಮ್ಮವರ ನೋಡಿ ಬನ್ನಿ,

ಕಕ್ಕುಲತೆಯಿಂದ ಮಾತಾಡಬನ್ನಿ

ಎಮ್ಮೊಡನೆ ಕೂಡಿ ಬನ್ನಿ'

ಎಂದು ಎಲ್ಲಾ ಕನ್ನಡಿಗರನ್ನು ಹೈದರಾಬಾದಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಸ್ವಾಗತಿಸಿದವರು ಶ್ರೀ ಜಿ.ಕೆ.ಪ್ರಾಣೇಶಾಚಾರ್.

ಒಕ್ಕೊರಲಿನಿಂದೆಲ್ಲರೂ ಕೂಗಿ ಈ ಒಕ್ಕೂಗ

ಈ ಹಿರಿಯ ಕೂಗ,

ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ, ಬಾಳ್ಗೆ,

ಸಿರಿಗನ್ನಡಂ ಗೆಲ್ಗೆ, ಬಾಳ್ಗೆ,

ಕನ್ನಡ ತಾಯ್ ಗೆಲ್ಗೆ ಬಾಳ್ಗೆ

ಎಂದು ಬಿ.ಎಂ.ಶ್ರೀ ಹಾರೈಸಿದರು.

ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು

ಬದುಕು ಬಲುಹೀನ ನಿಧಿಯು ಸದಭಿಮಾನದ ಗೂಡಾ

ಎಂದು ೧೯೨೦ರಲ್ಲೇ ಹುಯಿಲಗೋಳ ನಾರಾಯಣರಾಯರು ಹಂಬಲಿಸಿದರು.

ಎಲ್ಲಾದರೂ ಇರು, ಎಂತಾದರೂ ಇರು

ಎಂದೆಂದಿಗೂ ನೀ ಕನ್ನಡವಾಗಿರು

ಎಂದು ಕರೆ ನೀಡಿದ ಕುವೆಂಪು

ಬಾರಿಸು ಕನ್ನಡ ಡಿಂಡಿಮವ

ಓ ಕರ್ನಾಟಕ ಹೃದಯ ಶಿವ!

ಎಂದು ಮೊರೆಯಿಟ್ಟರು.

ಕನ್ನಡಿಗರೆಲ್ಲರೂ ಕರ್ನಾಟಕದಲ್ಲಿ ಒಂದಾಗಿ ಬಾಳುವ ಕನಸು ಕವಿಗಳದು ಮಾತ್ರವಾಗಿರಲಿಲ್ಲ. ಆ ಕಾಲದ ಬಹುತೇಕ ಎಲ್ಲಾ ಸಾಹಿತಿಗಳದೂ ಆಗಿತ್ತು. ಕನ್ನಡ –

ಕನ್ನಡಿಗ- ಕರ್ನಾಟಕ ಈ ಮೂರು ಘಟಕಗಳ ಏಕತೆಯನ್ನು ಕನ್ನಡಿಗರೆಲ್ಲರೂ ಬಯಸಿದ್ದರು. ರಾಜಕೀಯ ಪಕ್ಷಭೇದ ಮರೆತು ಏಕೀಕರಣಕ್ಕೆ ಹೋರಾಟ ನಡೆಯಿತು. ಹಲವು ಅಡ್ಡಿ-ಆತಂಕಗಳ ನಂತರ ಕರ್ನಾಟಕ ಏಕೀಕರಣವೇನೋ ಸಾಧಿತವಾಯಿತು. ಕರ್ನಾಟಕ ಏಕೀಕರಣ ಪೂರ್ಣವಾಗಿ ಆಗಿಲ್ಲ ಎಂಬ ಅಭಿಪ್ರಾಯವೂ ಇದೆ. ಅನೇಕ ಭಿನ್ನಭಿಪ್ರಾಯಗಳ ನಡುವೆ ಒಂದು ಪ್ರಶ್ನೆ ಮಾತ್ರ ಸಹಜವಾಗಿ ಕಾಡುತ್ತದೆ. 'ಏಕೀಕರಣಕ್ಕಾಗಿ ಹಂಬಲಿಸಿ, ಶ್ರಮಿಸಿದ ಹಿರಿಯರ ಧ್ಯೇಯೋದ್ದೇಶಗಳು ಈಡೇರಿವೆಯೇ?' ಒಂದೇ ಆಳ್ವಿಕೆಯಲ್ಲಿ, ಒಂದೇ ಆಗಿ ಬಾಳುತ್ತಾ ಸಮಾನತೆಯನ್ನು ಸಾಧಿಸಬೇಕು; ಎಲ್ಲೆಡೆ ಪ್ರಗತಿಕಾರ್ಯ ಸಮಾನವಾಗಿ ಆಗಬೇಕು. ಇತ್ಯಾದಿತ್ಯಾದಿ ಹಂಬಲಗಳು ನಮ್ಮ ಹಿರಿಯರಿಗಿತ್ತು. ಅವರ ಹಂಬಲಗಳು ಈಡೇರಿವೆಯೇ? ಎಂಬ ಪ್ರಶ್ನೆಗಳು ಸಮರ್ಪಕ ಉತ್ತರ ದೊರೆಯುವಂತಿಲ್ಲ. ಈವರೆಗೆ ಕರ್ನಾಟಕವನ್ನು ಆಳಿರುವ ಯಾವ ಸರ್ಕಾರವೂ ಎಲ್ಲ ಪ್ರದೇಶಗಳ ಪ್ರಗತಿಯ ಬಗೆಗೆ ಸಮಾನವಾದ ಆಸಕ್ತಿ ವಹಿಸಿಲ್ಲ ಎಂಬ ಆಕ್ಷೇಪ ಸಾರ್ವತ್ರಿಕವಾಗಿದೆ.

ಕರ್ನಾಟಕ ಏಕೀಕರಣದ ಯಶೋಗಾಥೆ ಅಥವಾ ಕೀರ್ತಿ ಪತಾಕೆಯೆಂದರೆ 'ಕನ್ನಡ ಬಾವುಟ'ದ ಗ್ರಂಥ. ಅದನ್ನು ಬಿ.ಎಂ.ಶ್ರೀಕಂಠಯ್ಯನವರು ಸಮಗ್ರ ಕನ್ನಡ ಸಾಹಿತ್ಯವನ್ನು ಸಂಕಲಿಸಿ, ಸಂಪಾದಿಸಿ ಮಹೋಪಕಾರ ಮಾಡಿದ್ದಾರೆ. ೧೯೩೮ರಲ್ಲಿ ಪ್ರಥಮ ಮುದ್ರಣವಾಗಿ ಇದುವರೆಗೆ ಕನ್ನಡ ಗ್ರಂಥಗಳ ಮುದ್ರಣದಲ್ಲಿ ಪ್ರಥಮವೆನಿಸಿದೆ".[೧]

'ಕನ್ನಡ ಬಾವುಟ'ದಲ್ಲಿನ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಕವನ ಹುಯಿಲುಗೋಳ ನಾರಾಯಣರಾಯರಿಂದ ರಚಿತವಾಗಿ, ಪಿ.ಕಾಳಿಂಗರಾಯರು ಹಾಡಿ, ಜನತೆಯಲ್ಲಿ ಏಕೀಕರಣದ ಹುಯ್ಯಲೆಬ್ಬಿಸಿದರು. 'ಕನ್ನಡ ಬಾವುಟ' ಗ್ರಂಥ ಅದರೊಳಗಿನ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಕವನ ಇಲ್ಲದಿದ್ದರೆ ಖಂಡಿತ ಕರ್ನಾಟಕ ಏಕೀಕರಣ ಆಗುತ್ತಿರಲಿಲ್ಲ ಎಂದರೆ ಅತಿಶಯೋಕ್ತಿಯಲ್ಲ. ಅಖಂಡ ಕರ್ನಾಟಕದ ಜನತೆಯ ಪ್ರತಿಬಿಂಬವನ್ನು 'ಕನ್ನಡ ಬಾವುಟ'ದಲ್ಲಿ ಕಾಣಬಹುದು. ಮೈಸೂರು, ಕರಾವಳಿ, ಬೆಳುವಲ, ಬಿಜಾಪುರ, ಹೈದರಾಬಾದ್ ಮತ್ತು ಕಲ್ಬುರ್ಗಿ ಸೀಮೆಯ ಕವನಗಳು ಚಿತ್ರಿತವಾಗಿದೆ. ಕನ್ನಡನಾಡು, ತುಳುನಾಡು, ಕೊಡಗು,

---

೧. ಬಿ.ಎಂ.ಶ್ರೀ.ಅವರ 'ಕನ್ನಡ ಬಾವುಟ', ಪುಟ. ೯೫.

ಹಂಪೆ, ತೆಂಕಣಗಾಳಿ, ತೆಂಗಾಳಿ, ಕನ್ನಡ ಮೊದಲಾದ ಕವನಗಳು ಏಕೀಕರಣದ ರಸಗಟ್ಟಿಗಳು.

ನವೋದಯ ಸಾಹಿತ್ಯದ ಸಮೃದ್ಧಿಯ ಕಾಲದಲ್ಲಿ ಭಾರತ ಪಾರತಂತ್ರ್ಯದಲ್ಲಿತ್ತು. ಸ್ವಾತಂತ್ರ್ಯದ ಆಕಾಂಕ್ಷೆ ಆ ಕಾಲದ ಪ್ರಜ್ಞಾವಂತರಲ್ಲೆಲ್ಲ ಅತ್ಯಂತ ತೀವ್ರವಾಗಿತ್ತು. ಈ ಕಾಲದಲ್ಲೇ ಭಾರತೀಯರ ಸ್ವಾತಂತ್ರ್ಯದ ಹೋರಾಟಕ್ಕೆ ಗಾಂಧೀಜಿಯವರ ನಾಯಕತ್ವ ದೊರೆತು ಸ್ವಾತಂತ್ರ್ಯದ ಬಯಕೆ ಜನರಲ್ಲಿ ತೀವ್ರವಾಗಿತ್ತು. ಜೊತೆಗೆ ಗಾಂಧೀಜಿಯವರ ಸತ್ಯ, ಅಹಿಂಸೆಯ ಪ್ರಯೋಗಗಳೂ ನಮ್ಮ ಸಾಹಿತ್ಯವನ್ನು ತೀವ್ರವಾಗಿ ಪ್ರಭಾವಿಸಿದ್ದವು. ಹಾಗಾಗಿ ಭಾರತೀಯರಲ್ಲಿ ಏಕತೆ, ಆತ್ಮಾಭಿಮಾನ ಮತ್ತು ಆತ್ಮಪ್ರತ್ಯಯಗಳ ಭಾವನೆಯನ್ನು ಬಿತ್ತುವ ಜವಾಬ್ದಾರಿಯನ್ನು ಸಾಹಿತ್ಯ ಹೊತ್ತುಕೊಂಡಿತು. ಆದ್ದರಿಂದ ಆ ಕಾಲಕ್ಕೆ ಸಮಷ್ಠಿ ಮೌಲ್ಯಗಳಾಗಿದ್ದ ಸಂಗತಿಗಳನ್ನೇ ಪ್ರತಿಯೊಬ್ಬರು ಪ್ರತಿಪಾದಿಸುತ್ತಾ ಜನರನ್ನು ಒಗ್ಗೂಡಿಸುವ ಕೆಲಸ ಮಾಡತೊಡಗಿದರು. ಇದಕ್ಕೆ ಇಂಗ್ಲಿಷಿನ ರೊಮ್ಯಾಂಟಿಕ್ ಸಾಹಿತ್ಯ ಒದಗಿಸಿದ ಕನಸುಗಾರಿಕೆ ಆಶಾವಾದಿತನ, ಆದರ್ಶವಾದಿತನ, ಆಧ್ಯಾತ್ಮಿಕತೆ ಮುಂತಾದ ಎಲ್ಲಾ ವಿ ಷಯಗಳೂ ಪೋಷಕವಾಗಿಯೇ ಕಂಡವು. ಹಾಗಾಗಿ ನಮ್ಮದೆನ್ನುವುದೆಲ್ಲವನ್ನೂ ಗೌರವಿಸುವ, ಕೀರ್ತಿಸುವ, ಪರಿಪಾಠವೂ ಬೆಳೆಯಿತು.

ಒಟ್ಟಾರೆಯಾಗಿ ನವೋದಯ ಸಾಹಿತ್ಯ ಕಾಲದ ಈ ನಾಡುನುಡಿಗೀತೆಗಳು ಸಾಧ್ಯವಾದಷ್ಟು ಕನ್ನಡಿಗರ ಮೇಲೆ ಪ್ರಭಾವ ಬೀರಿದೆ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಇಂದಿಗೂ ಕೂಡ ನಾಡು ನುಡಿಗೀತೆಗಳು ಯುವ ಜನರಲ್ಲಿ ಚೇತನವನ್ನು, ಹುಮ್ಮಸ್ಸನ್ನು ತುಂಬುವಲ್ಲಿ ಸಹಕಾರಿಯಾಗಿದೆ. ಜೀವಕ್ಕೆ ಹೇಗೆ ಉಸಿರು ಮುಖ್ಯವೋ ಹಾಗೆ ನಮ್ಮ ನಾಡಿನ ಜನತೆಯ ಹುಮ್ಮಸ್ಸಿಗೆ ಈ ನಾಡುನುಡಿ ಗೀತೆಗಳು ಮುಖ್ಯವಾಗಿದೆ.

# ಪರಾಮರ್ಶನ ಗ್ರಂಥಗಳು


೧. ಎಲ್.ಎಸ್.ಶೇಷಗಿರಿರಾವ್
ಹೊಸಗನ್ನಡ ಸಾಹಿತ್ಯ ಚರಿತ್ರೆ
ಪ್ರಕಾಶಣ – ಅಂಕಿತೆ ಪುಸ್ತಕ, ಬಸವನಗುಡಿ, ಬೆಂಗಳೂರು
ಮುದ್ರಣ – ೧೯೯೩.

೨. ಸಂ. ಡಾ. ಎಚ್.ಎಸ್.ಗೋಪಾಲರಾವ್
ಕರ್ನಾಟಕ ಏಕೀಕರಣ ಇತಿಹಾಸ
ಪ್ರಕಾಶನ – ನವಕರ್ನಾಟಕ ಪ್ರಕಾಶನ
ಮುದ್ರಣ – ೧೯೯೬

೩. ಬಿ.ಎಂ.ಶ್ರೀ.
ಕನ್ನಡದ ಬಾವುಟ
ಪ್ರಕಾಶನ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ಮುದ್ರಣ – ೧೯೮೪
ಒಂಬತ್ತನೇ ಮುದ್ರಣ

೪. ಸಂ. ಪ್ರೊ. ಜಿ.ವೆಂಕಟಸುಬ್ಬಯ್ಯ
ಕರ್ನಾಟಕ ಏಕೀಕರಣದ ಅನುಭವಗಳು
ಪ್ರಕಾಶನ – ಸಪ್ನ ಬುಕ್‌ಹೌಸ್
ಮುದ್ರಣ – ೨೦೦೯
ಎರಡನೇ ಮುದ್ರಣ

೫. ಮಂಜುನಾಥ್.ಕೆ
ದೇಶಭಕ್ತಿ ಗೀತೆಗಳು ಹಾಗೂ ನಾಡಗೀತೆಗಳು
ಪ್ರಕಾಶನ – ಚಂದನ ಪ್ರಕಾಶನ, ಬೆಂಗಳೂರು
ಮುದ್ರಣ – ೨೦೦೭

೬. ರಂ.ಶ್ರೀ.ಮುಗಳಿ
ಕನ್ನಡ ಸಾಹಿತ್ಯ ಚರಿತ್ರೆ
ಪ್ರಕಾಶನ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ಮುದ್ರಣ

೭. ಸಂ. ಹೆಚ್ಚೆಸ್ಕೆ
ಅವಲೋಕನ: ಕರ್ನಾಟಕ ಪರಂಪರೆಯ ಸಮೀಕ್ಷೆ
ಮೊದಲ ವಿಶ್ವಕನ್ನಡ ಸಮ್ಮೇಳನದ ಸ್ಮೃತಿ ಸಂಪುಟ
ಮುದ್ರಣ – ೧೯೮೫

೮. ಕರ್ನಾಟಕ : ಕನ್ನಡ ವಿಷಯ ವಸ್ತುಕೋಶ
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಮುದ್ರಣ - ೧೯೭೯

೯. ಡಾ. ಸಾ.ಶಿ.ಮರುಳಯ್ಯ
ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನ ಪ್ರವಾಸಾನುಭವಗಳು
ಮುದ್ರಣ - ೧೯೯೮

೧೦. ಕುವೆಂಪು
ಇಕ್ಷು ಗಂಗೋತ್ರಿ
ಪ್ರಕಾಶನ - ಉದಯರವಿ ಪ್ರಕಾಶನ
ಮುದ್ರಣ - ೧೯೯೪

೧೧. ಬಿ.ಎಂ.ಶ್ರೀ
ಹೊಂಗನಸುಗಳು
ಪ್ರಕಾಶನ - ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ಮುದ್ರಣ - ೧೯೪೩

೧೨. ಡಾ. ಎಸ್.ಎಂ.ಹಿರೇಮಠ
ಕನ್ನಡ ಸಾಹಿತ್ಯ ಚರಿತ್ರೆಯ ಘಟ್ಟಗಳು
ಪ್ರಕಾಶನ - ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ಮುದ್ರಣ - ೧೯೯೪

೧೩. ಕುವೆಂಪು
ಕೋಗಿಲೆ ಮತ್ತು ಸೋವಿಯತ್ ರಷ್ಯಾ
ಪ್ರಕಾಶನ - ಉದಯರವಿ ಪ್ರಕಾಶನ
ಮುದ್ರಣ - ೧೯೯೩

*****